KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೬ | ಬೆಂಗಳೂರು, ಗುರುವಾರ, ಮಾರ್ಚ್ ೧೭, ೨೦೧೧, (ಫಾಲ್ಗುಣ ೨೬, ಶಕ ವರ್ಷ ೧೯೩೨) | ಸಂಚಿಕೆ ೧೧ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

ತಿದ್ದುಪಡಿ

ಸಂಖ್ಯೆ: ಸಿಆಸುಇ 042/ಕೆಇವಿ 10, ಬೆಂಗಳೂರು, ದಿನಾಂಕ 03-01-2011

ದಿನಾಂಕ 22-12-10ರ ಆದೇಶ ಸಂಖ್ಯೆ ಸಿಆಸುಇ 042 ಕೆಇವಿ 10ರ ಪುಟ 6 ರಲ್ಲಿನ ಕ್ರಮ ಸಂಖ್ಯೆ 12ರ ನಂತರದ ಪ್ರಸ್ತಾವನೆಯ ಭಾಗವನ್ನು ತೆಗೆದುಹಾಕಲಾಗಿದೆ. ಅದರ ಬದಲಿಗೆ ಈ ಕೆಳಕಂಡ ಕಂಡಿಕೆಯನ್ನು ಸೇರಿಸಿ ಓದಿಕೊಳ್ಳುವುದು.

ಹೆಚ್ಚುವರಿ ಪೋಲೀಸು ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ಬೆಂಗಳೂರು ರವರ ಮೇಲೆ ಓದಲಾದ ಪ್ರಸ್ತಾವನೆಯನ್ನು ಸರ್ಕಾರವು, ಕೂಲಂಕಷವಾಗಿ ಸಾಕ್ಷ್ಯಿದಾರಗಳೊಂದಿಗೆ ಪರಿಶೀಲಿಸಿರುವುದರಿಂದಲೂ ಶ್ರೀ ಎನ್. ಎಂ. ನೀಲಕಂಠ ರವರು ಲಂಚದ ಹಣಕ್ಕಾಗಿ ಫಿರ್ಯಾದುದಾರರನ್ನು ಒತ್ತಾಯಿಸಿರುವುದು ಮತ್ತು ಅದನ್ನು ಅವರ ಸಿಬ್ಬಂದಿಯವರ ಮೂಲಕ ಪಡೆಯುವಲ್ಲಿನ ಕೃತ್ಯವು ಮೇಲಿನ ವಿವರಗಳಿಂದ ನಿಸ್ಸಂಶಯವಾಗಿ ಮೇಲ್ನೋಟಕ್ಕೆ ಸಾಬೀತಾಗಿರುವುದಾಗಿ ಸಿಸಿಎ ನಿಯಮ 10 (3)ರ ಪರಿಶೀಲನೆಯಂತೆ ಮನವರಿಕೆಯಾಗಿರುವುದರಿಂದಲೂ ಇವರ ಈ ವರ್ತನೆಯು ಕರ್ತವ್ಯದಲ್ಲಿನ ನಿಷ್ಠೆ ಮತ್ತು ಶ್ರದ್ಧೆಯನ್ನು ಉಲ್ಲಂಘಿಸಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 10(1) ಅನ್ನು ಆಕರ್ಷಿಸಿರುವುದು ಮೇಲ್ನೋಟಕ್ಕೆ ದೃಢಪಟ್ಟಿದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

2. ಅದೇ ಆದೇಶದ ಪುಟ 7 ಮತ್ತು 8 ಆದೇಶ ಭಾಗದ 1ನೇ ಕಂಡಿಕೆಯ ಬದಲಿಗೆ ಈ ಕೆಳಕಂಡಂತೆ ಸೇರಿಸಿ ಓದಿಕೊಳ್ಳುವುದು.

ಪ್ರಸ್ತಾವನೆಯಲ್ಲಿನ ವಿವರಗಳನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಶ್ರೀ ಎನ್. ಎಂ. ನೀಲಕಂಠ, ಕೆಎಎಸ್ (ಕಿರಿಯ ಶ್ರೇಣಿ) ವಿಶೇಷ ಭೂ ಸ್ವಾಧೀನಾಧಿಕಾರಿ, ಬೆಂಗಳೂರು ಇವರು ಕರ್ತವ್ಯ ಲೋಪ ಎಸಗಿರುವುದು, ಕರ್ತವ್ಯದಲ್ಲಿ, ನಿಷ್ಠೆ ತೋರಿಲ್ಲದಿರುವುದು ಮತ್ತು ಕರ್ತವ್ಯದಲ್ಲಿ ಶ್ರದ್ಧೆ ಹೊಂದಿಲ್ಲದಿರುವ ಮೂಲಕ ಗಂಭೀರ ಕರ್ತವ್ಯ ನಿರ್ಲಕ್ಷ್ಯತೆ ತೋರಿರುವುದು ಸಾಕ್ಷ್ಯಾಧಾರಗಳಿಂದ ಮೇಲ್ನೋಟಕ್ಕೆ ಕಂಡುಬಂದಿರುವುದರಿಂದ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957ರ ನಿಯಮ 10 (1)(d) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು, ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೇವೆಯಿಂದ ಅಮಾನತ್ತಿನಲ್ಲಿಡುತ್ತದೆ.

3. ಅದೇ ಆದೇಶದ ಆದೇಶ ಭಾಗದ ಕಂಡಿಕೆ 2 ಮತ್ತು 3 ಯಥಾ ರೀತಿ ಮುಂದುವರಿಯುವುದು

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಾ|| ಎಂ. ಟಿ. ರೇಜು**

ಸರ್ಕಾರದ ಉಪ ಕಾರ್ಯದರ್ಶಿ

ಸಿಆಸುಇ (ಸೇವೆಗಳು-2)

ಪಿ.ಆರ್. ನಂ. 190

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

ಸೇರ್ಪಡೆ

ಸಂಖ್ಯೆ: ಸಿಆಸುಇ 540/ಸಅಸೇ 10, ಬೆಂಗಳೂರು, ದಿನಾಂಕ 07–01–2011

ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 540 ಸಅಸೇ 2010, ದಿನಾಂಕ 3–12–2010 ರಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯಲ್ಲಿ ಸೃಜಿಸಲಾಗಿರುವ ಸರ್ಕಾರದ ಪ್ರಧಾನ ಕಾರ್ಯದರ್ಶಿ (ಇಲಾಖಾ ವಿಚಾರಣಾ ಕೈಪಿಡಿ) ಹುದ್ದೆಯನ್ನು **"ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಪ್ರಧಾನ ಕಾರ್ಯದರ್ಶಿ"** (Officer on Special Duty and Ex-Officio Principal Secretary) ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ. ಆರ್. ವಿಜಯಾನಂದ ಶರ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಆಸು ಇಲಾಖೆ (ಸೇವೆಗಳು–3)

ಪಿ.ಆರ್. ನಂ. 191

## ಇಂಧನ ಸಚಿವಾಲಯ

ತಿದ್ದುಪಡಿ

ಸಂಖ್ಯೆ: ಇಎನ್ 148 ಇಬಿಎಸ್ 2010, ಬೆಂಗಳೂರು, ದಿನಾಂಕ 01–01–2011

**ವಿಷಯ** : ಶ್ರೀ ಕೆ. ಸಿ. ರೆಡ್ಡಿ, ವಿದ್ಯುತ್ ಪರಿವೀಕ್ಷಕರು, ಬಳ್ಳಾರಿ ಇವರಿಗೆ ಪರಿಷ್ಕೃತ ಶ್ರೇಣಿಯಲ್ಲಿ ಸ್ಥಗಿತ ವೇತನ ಬಡ್ತಿ ಮಂಜೂರು ಮಾಡುವ ಬಗ್ಗೆ.

***

ಸರ್ಕಾರಿ ಆದೇಶ ಸಂಖ್ಯೆ: ಇಎನ್ 126 ಇಬಿಎಸ್ 2007 ದಿನಾಂಕ 29–04–2010ರ ಆದೇಶದಲ್ಲಿ ಆದೇಶ ಭಾಗದ 4ನೇ ಸಾಲಿನಲ್ಲಿ ಇರುವ ವೇತನ ಶ್ರೇಣಿ "ರೂ. 6300–11840"ನ್ನು "ರೂ. 14050–350–14450–400–16800–450–19500–525–22650–600–25050 (ರೂ. 14050–25050)" ಎಂಬುದಾಗಿ ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುಜಾತಮ್ಮ**

ಪೀಠಾಧಿಕಾರಿ, ಇಂಧನ ಇಲಾಖೆ

ಪಿ.ಆರ್. ನಂ. 192

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಆರ್. ಜಿ. ಪಾಲ್ಕರ್, ಹಿಂದಿನ ತಹಶೀಲ್ದಾರ್, ಖಾನಾಪುರ, ಬೆಳಗಾಂ ಜಿಲ್ಲೆ, ಪ್ರಸ್ತುತ ನಿವೃತ್ತರು ಇವರ ವಿರುದ್ಧ ಇಲಾಖಾ ವಿಚಾರಣೆ ಕುರಿತು–ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರಿ ಆದೇಶ ಸಂಖ್ಯೆ : ಆರ್‌ಡಿ 29 ಎಡಿಇ 2006, ದಿನಾಂಕ 29–4–2008.
2. ವಿಚಾರಣಾಧಿಕಾರಿಯಾದ ಶ್ರೀ ಎ.ಎ. ಹುಲಗೇರಿ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಧಾರವಾಡ ಇವರು ಸಲ್ಲಿಸಿರುವ ವಿಚಾರಣಾ ವರದಿ, ದಿನಾಂಕ 5.1.2009.
3. ಎರಡನೇ ಕಾರಣ ಕೇಳುವ ನೋಟೀಸು, ಸಂಖ್ಯೆ ಆರ್‌ಡಿ 29 ಎಡಿಇ 2006, ದಿನಾಂಕ 20.2.2009.
4. ಶ್ರೀ ಆರ್. ಜಿ. ಪಾಲ್ಕರ್, ಹಿಂದಿನ ತಹಶೀಲ್ದಾರ್, ಖಾನಾಪುರ, ಬೆಳಗಾಂ ಜಿಲ್ಲೆ, ಪ್ರಸ್ತುತ ನಿವೃತ್ತರು ಸಲ್ಲಿಸಿರುವ ದಿನಾಂಕ 29–4–2009 ರ ಲಿಖಿತ ಹೇಳಿಕೆ.
5. ಸರ್ಕಾರದ ಪತ್ರ ಸಂಖ್ಯೆ : ಕಂಇ 29 ಎಡಿಇ 2006, ದಿನಾಂಕ 10–9–2009.
6. ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ : ಪಿಎಸ್‌ಸಿ 128 ಸಿಎನ್‌ಎಸ್ 2009, ದಿನಾಂಕ 1–12–2009.

**ಪ್ರಸ್ತಾವನೆ :**

ಶ್ರೀ ಆರ್. ಜಿ. ಪಾಲ್ಕರ್, ಹಿಂದಿನ ತಹಶೀಲ್ದಾರ್, ಖಾನಾಪುರ, ಬೆಳಗಾಂ ಜಿಲ್ಲೆ, ಇಲ್ಲಿ (ಪ್ರಸ್ತುತ ನಿವೃತ್ತರು) ಇವರು 2005–06ನೇ ಸಾಲಿನಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ, ಕರ್ನಾಟಕ ಭೂ ಕಂದಾಯ ಅಧಿನಿಯಮಗಳು 1964ರನ್ವಯ ನಿಗದಿತ ಅವಧಿಯಲ್ಲಿ ಕ್ರಮ ಕೈಗೊಳ್ಳದೇ, ಸರ್ಕಾರಿ ದಾಖಲೆಗಳನ್ನು ತಿದ್ದುವ ಅಪರಾಧಿತ ಕೃತ್ಯದಲ್ಲಿ ತೊಡಗಿರುವ ದುರ್ನಡತೆಯ ಆಪಾದನೆಗೆ ಸಂಬಂಧಿಸಿದಂತೆ, ಅವರ ವಿರುದ್ಧ 1957ರ ಕರ್ನಾಟಕ ನಾಗರೀಕ ಸೇವಾ (ವ.ನಿ&ಮೇ) ನಿಯಮಾವಳಿ ನಿಯಮಗಳನ್ವಯ ಶಿಸ್ತು ಕ್ರಮ ಜರುಗಿಸುವಂತೆ ಆರೋಪಿತರ ವಿರುದ್ಧ ಕರಡು ದೋಷಾರೋಪಣಾ ಪಟ್ಟಿಯನ್ನು ಅನುಬಂಧ 1 ರಿಂದ 4 ರವರೆಗೆ ಸರ್ಕಾರಕ್ಕೆ ದಿನಾಂಕ 6–3–2006 ರಂದು ಜಿಲ್ಲಾಧಿಕಾರಿಗಳು, ಬೆಳಗಾಂ ರವರು ಪ್ರಸ್ತಾವನೆ ಸಲ್ಲಿಸಿದ್ದರನ್ವಯ, ಸರ್ಕಾರವು ದಿನಾಂಕ 27–4–2006 ರಂದು ಕಾರಣ ಕೇಳುವ ನೋಟೀಸನ್ನು ಶ್ರೀ ಆರ್. ಜಿ. ಪಾಲ್ಕರ್, ಹಿಂದಿನ ತಹಶೀಲ್ದಾರ್, ಖಾನಾಪುರ, ಬೆಳಗಾಂ ಜಿಲ್ಲೆ ರವರಿಗೆ

ಜಾರಿ ಮಾಡಿ ಆರೋಪಗಳ ಬಗ್ಗೆ ಲಿಖಿತ ಹೇಳಿಕೆ ಸಲ್ಲಿಸಲು ಸೂಚಿಸಲಾಗಿತ್ತು. ಅದರಂತೆ ಆರೋಪಿತರು ದಿನಾಂಕ 3–7–2006 ರಂದು ತಮ್ಮ ಲಿಖಿತ ರಕ್ಷಣಾ ಹೇಳಿಕೆಯನ್ನು ಸಲ್ಲಿಸಿ, ತಮ್ಮನ್ನು ಆರೋಪಗಳಿಂದ ದೋಷಮುಕ್ತಗೊಳಿಸುವಂತೆ ಕೋರಿರುತ್ತಾರೆ.

ಸದರಿ ರಕ್ಷಣಾ ಹೇಳಿಕೆಯನ್ನು ಪರಿಶೀಲಿಸಲಾಗಿ, ಆಪಾದನೆಯನ್ನು ಸಮರ್ಥಿಸುವಂತಹ ಅಂಶಗಳು ಹಾಗೂ ದಾಖಲಾತಿಗಳನ್ನು ಒದಗಿಸಿರುವುದಿಲ್ಲವಾದ್ದರಿಂದ, ಸರ್ಕಾರವು ಪ್ರಕರಣದಲ್ಲಿ ಸತ್ಯಾಸತ್ಯತೆಯನ್ನು ತಿಳಿಯಲು 1957ರ ಕರ್ನಾಟಕ ನಾಗರೀಕ ಸೇವಾ (ವ.ನಿ.&ಮೇ) ನಿಯಮಾವಳಿಯ ನಿಯಮ 11 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಇಲಾಖಾ ವಿಚಾರಣೆಯನ್ನು ಜರುಗಿಸಲು ಶ್ರೀ ಎ.ಎ. ಹುಲಗೇರಿ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಧಾರವಾಡ ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮತ್ತು 1957ರ ಕರ್ನಾಟಕ ನಾಗರೀಕ ಸೇವಾ (ವ.ನಿ.&ಮೇ) ನಿಯಮಾವಳಿಯ ನಿಯಮ 11(5) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕೇಂದ್ರ ಸ್ಥಾನಿಕ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ, ಬೆಳಗಾಂ ಇವರನ್ನು ಮೇಲೆ ಓದಲಾದ ಕ್ರಮ ಸಂಖ್ಯೆ : (1)ರ ಸರ್ಕಾರದ ದಿನಾಂಕ 29–4–2008 ರ ಆದೇಶದಲ್ಲಿ ನೇಮಿಸಿ ಆದೇಶಿಸಲಾಗಿತ್ತು.

ಸರ್ಕಾರದ ದಿನಾಂಕ 29–4–2008 ರ ಆದೇಶದಂತೆ, ವಿಚಾರಣಾಧಿಕಾರಿಗಳಾದ ಶ್ರೀ ಎ.ಎ. ಹುಲಗೇರಿ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಧಾರವಾಡ ರವರು ಕೂಲಂಕಷವಾಗಿ ವಿಚಾರಣೆ ನಡೆಸಿ ಮೇಲೆ ಓದಲಾದ ಕ್ರಮ ಸಂಖ್ಯೆ : (2) ರಂತೆ ದಿನಾಂಕ 5–1–2009 ರಂದು ಮುಂದಿನ ಸೂಕ್ತ ಕ್ರಮಕ್ಕಾಗಿ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಸದರಿ ವಿಚಾರಣಾ ವರದಿಯಲ್ಲಿ ವಿಚಾರಣಾಧಿಕಾರಿಗಳು ಆರೋಪಿತರ ವಿರುದ್ಧದ 11 ಆರೋಪಗಳಲ್ಲಿ ಆರೋಪ 1, 2, 3, 4, 6, 8 ಮತ್ತು 9 ಗಳು ಸಾಬೀತಾಗಿರುತ್ತದೆ, ಆರೋಪ 5, 7, 10, 11 ಗಳು ಸಾಬೀತಾಗಿರುವುದಿಲ್ಲವೆಂದು ತಿಳಿಸಿರುತ್ತಾರೆ.

ವಿಚಾರಣಾಧಿಕಾರಿಗಳ ದಿನಾಂಕ 5–1–2009 ರ ವಿಚಾರಣಾ ವರದಿಯನ್ನು ಲಗತ್ತಿಸಿ ಮೇಲೆ ಓದಲಾದ ಕ್ರಮ ಸಂಖ್ಯೆ: (3) ರ ದಿನಾಂಕ 20–2–2009ರ ಸರ್ಕಾರದಿಂದ ಜಾರಿ ಮಾಡಿರುವ ಎರಡನೇ ಕಾರಣ ಕೇಳುವ ನೋಟೀಸಿನಲ್ಲಿ, ವಿಚಾರಣಾ ಪ್ರಾಧಿಕಾರಿಯ ನಿರ್ಣಯಗಳ ಬಗ್ಗೆ ನಿಮ್ಮ ಸಮಜಾಯಿಷಿ ಏನಾದರೂ ಇದ್ದರೆ, ನೋಟೀಸು ತಲುಪಿದ 15 ದಿನಗಳೊಳಗಾಗಿ ಸಲ್ಲಿಸುವುದು ಎಂದು ತಿಳಿಸಲಾಗಿರುತ್ತದೆ.

ಸರ್ಕಾರದ ದಿನಾಂಕ 20–2–2009ರ ಎರಡನೇ ಕಾರಣ ಕೇಳುವ ನೋಟೀಸಿಗೆ ಶ್ರೀ ಆರ್. ಜಿ. ಪಾಲ್ಕರ್, ಹಿಂದಿನ ತಹಶೀಲ್ದಾರ್, ಖಾನಾಪುರ, ಬೆಳಗಾಂ ಜಿಲ್ಲೆ ಪ್ರಸ್ತುತ ನಿವೃತತರು ಮೇಲೆ ಓದಲಾದ ಕ್ರಮ ಸಂಖ್ಯೆ : (4) ದಿನಾಂಕ 29.4.2009 ರಂದು ತಮ್ಮ ಲಿಖಿತ ಸಮಜಾಯಿಷಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಸದರಿ ಉತ್ತರದಲ್ಲಿ ಜೆ–ಫಾರಂಗಳನ್ನು ಕಂಪ್ಯೂಟರ್ ವಿಭಾಗಕ್ಕೆ ಕಳುಹಿಸಿದ್ದು, ಅವು ತಮ್ಮ ಬಳಿ ಇರಲಿಲ್ಲವೆಂದು ತಾವು ಪ್ರವಾಸ ಕೈಗೊಂಡಾಗ ಉಪ ವಿಭಾಗಾಧಿಕಾರಿಗಳಿಗೆ ಶಿರಸ್ತೇದಾರರು ತಮ್ಮ ವಿರುದ್ಧ ಪಿತೂರಿ ನಡೆಸಿ ತಮ್ಮ ಹತ್ತಿರ ಜೆ–ಫಾರಂಗಳು ಬಾಕಿ ಇವೆಯೆಂದು ವರದಿ ಮಾಡಿದ್ದರಿಂದ ತಪ್ಪಾಗಿದೆಯೆಂದು ತಿಳಿಸಿರುತ್ತಾ, ಅದೇ ರೀತಿ ಭೂ ಪರಿವರ್ತನೆಯು ತಮ್ಮ ಅಧಿಕಾರ ವ್ಯಾಪ್ತಿಗೆ ಮೀರಿದ್ದರಿಂದ ಆ ಆದೇಶವನ್ನು ರದ್ದುಪಡಿಸಿರುವುದಾಗಿ, 3ನೇ ಆಪಾದನೆಯಲ್ಲಿ ಮರಣ ಪ್ರಮಾಣಪತ್ರ ಕೋರಿರುವ ಅರ್ಜಿಯನ್ನು ದಿನಾಂಕ 20–9–2005 ರಂದು ಪಡೆದಿದ್ದು ಉತ್ತರ ಜೀವಿತ ಪ್ರಮಾಣಪತ್ರವನ್ನು ದಿನಾಂಕ 22–10–2005 ರಂದು ನೀಡಲಾಗಿದ್ದು, ಇದರಿಂದ ಎರಡೇ ದಿವಸಗಳಲ್ಲಿ ನೀಡಲಾಗಿದೆ ಎಂದು ಹೇಳಲಾಗಿರುವುದನ್ನು ಅಲ್ಲಗಳೆಯಲಾಗಿದೆ ಎಂದು, ಇದೇ ರೀತಿ ಸೆಪ್ಟೆಂಬರ್, ಅಕ್ಟೋಬರ್ ಹಾಗೂ ನವೆಂಬರ್ ಡೈರಿಗಳನ್ನು ಸಕಾಲದಲ್ಲಿ ಸಲ್ಲಿಸಲಾಗಿದೆ ಎಂದು ಹಾಗೂ ಸಿಬ್ಬಂದಿ ಕೊರತೆಯಿಂದ ಅತಿವೃಷ್ಟಿ ಪರಿಹಾರದ ಬಗ್ಗೆ ವರದಿ ಸಲ್ಲಿಸುವಲ್ಲಿ ವಿಳಂಬವಾಗಿದೆ ಎಂದು ತಿಳಿಸಿ ತಮ್ಮ ವಿರುದ್ಧದ ಆಪಾದನೆಯನ್ನು ಕೈಬಿಡುವಂತೆ ಕೋರಿರುತ್ತಾರೆ. ಉಪ ವಿಭಾಗಾಧಿಕಾರಿಗಳು ತಹಶೀಲ್ದಾರರ ಕಛೇರಿಯನ್ನು ತಪಾಸಣೆ ನಡೆಸಿದಾಗ 286 ಅರ್ಜಿಗಳು ವಿವಿಧ ಸಿಬ್ಬಂದಿ ಬಳಿ ಬಾಕಿ ಇದ್ದುದರಿಂದ, ಆಪಾದಿತರು ಕೇವಲ 86 ಅರ್ಜಿಗಳು ಬಾಕಿ ಇವೆಯೆಂದು ಹೇಳಿರುವುದು ಸಮಂಜಸವಾಗಿಲ್ಲದಿರುವುದರಿಂದ, ಆಪಾದಿತ ವಿರುದ್ಧದ ಆಪಾದನೆ ಸಾಬೀತಾಗಿದೆ ಎಂದು ವಿಚಾರಣಾಧಿಕಾರಿಗಳು ತಿಳಿಸಿರುತ್ತಾರೆ. ಈ ಎಲ್ಲಾ ಆಪಾದನೆಗಳು ಸಾಬೀತಾಗಿವೆ ಎಂದು ಹೇಳಿರುವುದು ಆಪಾದಿತರ ಕರ್ತವ್ಯಲೋಪಕ್ಕೆ ಸಂಬಂಧಿಸಿದ್ದು, ಇದರಲ್ಲಿ ಯಾವುದೇ ಆರ್ಥಿಕ ನಷ್ಟದ ಆಪಾದನೆಗಳು ಇರುವುದಿಲ್ಲ. ಕರ್ತವ್ಯಲೋಪದ ಆಪಾದನೆಗಳು ವಿಚಾರಣೆಯಲ್ಲಿ ಸಾಬೀತಾಗಿರುವುದರಿಂದ, ಆಪಾದಿತ ನಿವೃತ್ತಿ ವೇತನದಲ್ಲಿ ಶೇಕಡ 10 ರಷ್ಟನ್ನು ಒಂದು ವರ್ಷದವರೆಗೆ ಕಡಿತಗೊಳಿಸುವ ದಂಡನೆ ವಿಧಿಸಲು ಸರ್ಕಾರವು ತೀರ್ಮಾನಿಸಿರುತ್ತದೆ.

ಅದರಂತೆ ಸರ್ಕಾರವು ಮೇಲೆ ಓದಲಾದ ಕ್ರಮಸಂಖ್ಯೆ : (5) ರ ದಿನಾಂಕ 10–9–2009ರ ಸರ್ಕಾರದ ಪತ್ರದಲ್ಲಿ ಶ್ರೀ ಆರ್. ಜಿ. ಪಾಲ್ಕರ್, ಹಿಂದಿನ ತಹಶೀಲ್ದಾರ್, ಖಾನಾಪುರ, ಬೆಳಗಾಂ ಜಿಲ್ಲೆ ಪ್ರಸ್ತುತ ನಿವೃತ್ತರು ಇವರಿಗೆ ಕೆ.ಸಿ.ಎಸ್.ಆರ್. ನಿಯಮ 214 ರಡಿಯಲ್ಲಿ ಇವರ ವಿರುದ್ಧದ ಇಲಾಖಾ ವಿಚಾರಣೆಯಲ್ಲಿ ಆಪಾದನೆಗಳು ಸಾಬೀತಾಗಿರುವುದರಿಂದ ಇವರ ನಿವೃತ್ತಿ ವೇತನದಲ್ಲಿ ಶೇಕಡ 10 ರಷ್ಟನ್ನು ಒಂದು ವರ್ಷದವರೆಗೆ ಕಡಿತಗೊಳಿಸುವ ದಂಡನೆಯನ್ನು ವಿಧಿಸಲು ತೀರ್ಮಾನಿಸಿರುವ ಸರ್ಕಾರದ ಪ್ರಸ್ತಾವನೆಗೆ ಕರ್ನಾಟಕ ಲೋಕ ಸೇವಾ ಆಯೋಗದ ಸಮ್ಮತಿ ನೀಡುವಂತೆ ಕೋರಲಾಗಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ : (6) ರ ಕಾರ್ಯದರ್ಶಿ, ಕರ್ನಾಟಕ ಲೋಕ ಸೇವಾ ಆಯೋಗದ ದಿನಾಂಕ 1.12.2009ರ ಪತ್ರದಲ್ಲಿ ಶ್ರೀ ಆರ್. ಜಿ. ಪಾಲ್ಕರ್, ಹಿಂದಿನ ತಹಶೀಲ್ದಾರ್, ಖಾನಾಪುರ, ಬೆಳಗಾಂ ಜಿಲ್ಲೆ ಪ್ರಸ್ತುತ ನಿವೃತ್ತರು ಇವರಿಗೆ ಕೆ.ಸಿ.ಎಸ್.ಆರ್. ನಿಯಮ 214 ರಡಿಯಲ್ಲಿ ಇವರ ನಿವೃತ್ತಿ ವೇತನದಲ್ಲಿ ಶೇಕಡ 10 ರಷ್ಟನ್ನು ಒಂದು ವರ್ಷದವರೆಗೆ ಕಡಿತಗೊಳಿಸುವ ದಂಡನೆಯನ್ನು ವಿಧಿಸಲು ತೀರ್ಮಾನಿಸಿರುವ ಸರ್ಕಾರದ ಪ್ರಸ್ತಾವನೆಗೆ ಸಹಮತಿಸಿದೆ ಎಂದು ತಿಳಿಸಿರುತ್ತಾರೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 29 ಎಡಿಇ 2006, ಬೆಂಗಳೂರು, ದಿನಾಂಕ : 3–12–2010**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಆರೋಪಿತ ನೌಕರರಾದ ಶ್ರೀ ಆರ್. ಜಿ. ಪಾಲ್ಕರ್, ಹಿಂದಿನ ತಹಶೀಲ್ದಾರ್, ಖಾನಾಪುರ, ಬೆಳಗಾಂ ಜಿಲ್ಲೆ ಪ್ರಸ್ತುತ ನಿವೃತ್ತರು ಇವರ ವಿರುದ್ಧದ ಇಲಾಖಾ ವಿಚಾರಣೆ ಪ್ರಕರಣದಲ್ಲಿ ಆಪಾದನೆಗಳು ಸಾಬೀತಾಗಿರುವ ಕಾರಣ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ 1958ರ ನಿಯಮ 214 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಇವರ ವಿರುದ್ಧದ ಇಲಾಖಾ ವಿಚಾರಣೆಯಲ್ಲಿ ಆಪಾದನೆಗಳು ಸಾಬೀತಾಗಿರುವುದರಿಂದ ಇವರ ನಿವೃತ್ತಿ ವೇತನದಲ್ಲಿ ಶೇಕಡ 10 ರಷ್ಟನ್ನು ಒಂದು ವರ್ಷದವರೆಗೆ ಕಡಿತಗೊಳಿಸುವ ದಂಡನೆಯನ್ನು ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಬಿ. ಸಸಾಲಟ್ಟಿ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು–3).

ಪಿ.ಆರ್. 25

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ :** ಸರ್ಕಾರದ ಇಲಾಖೆಗಳು, ಸಾರ್ವಜನಿಕ ಉದ್ದಿಮೆಗಳು, ಸ್ವಾಯತ್ತ ಸಂಸ್ಥೆಗಳು ಹಾಗೂ ಸರ್ಕಾರಿ ಸಂಸ್ಥೆಗಳಲ್ಲಿ ಪರಿಶಿಷ್ಟ ಜಾತಿ/ಪರಿಶಿಷ್ಟ ವರ್ಗದ ನೌಕರರಿಗೆ ಬಡ್ತಿ ನೀಡುವಲ್ಲಿ ರೋಸ್ಟರ್ ನಿಯಮಗಳನ್ನು ಅನುಸರಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಸುತ್ತೋಲೆ ಸಂಖ್ಯೆ : ಸಿಆಸುಇ 34 ಸೆನೆನಿ 2010, ದಿನಾಂಕ 28–05–2010.

2. ಸರ್ಕಾರದ ಅನಧಿಕೃತ ಟಿಪ್ಪಣಿ ಸಂಖ್ಯೆ : ಸಿಆಸುಇ 34 ಸೆನೆನಿ 2010, ದಿನಾಂಕ 11.06.2010.

3. ಸರ್ಕಾರದ ಪತ್ರ ಸಂಖ್ಯೆ : ಸಕ ಇ 26 ಎಸ್‌ಟಿಸಿ 2010, ದಿನಾಂಕ 07–07–2010.

**ಪ್ರಸ್ತಾವನೆ :**

ರಾಜ್ಯದ ವಿವಿಧ ಸರ್ಕಾರದ ಇಲಾಖೆಗಳು, ಸಾರ್ವಜನಿಕ ಉದ್ದಿಮೆಗಳು, ಸ್ವಾಯತ್ತ ಸಂಸ್ಥೆಗಳು ಹಾಗೂ ಸರ್ಕಾರಿ ಸಂಸ್ಥೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಅಧಿಕಾರಿ/ನೌಕರರಿಗೆ ಬಡ್ತಿ ನೀಡುವಲ್ಲಿ ಸರ್ಕಾರದ ಆದೇಶ ಸಂಖ್ಯೆ ಡಿ.ಪಿ.ಎ.ಆರ್. 29 ಎಸ್.ಡಿ.ಸಿ 77, ದಿನಾಂಕ 27–04–1978 ಹಾಗೂ ತತ್ಸಂಬಂಧ ನಂತರ ಹೊರಡಿಸಿದ ಆದೇಶ ಮತ್ತು ಸುತ್ತೋಲೆಗಳನ್ವಯ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದ ಅಧಿಕಾರಿ/ನೌಕರರುಗಳಿಗೆ ಅನುಕ್ರಮವಾಗಿ ಶೇಕಡ 15 ಮತ್ತು 3ರ ಪ್ರಮಾಣದಲ್ಲಿ ಮೀಸಲಾತಿಯನ್ನು 33 ಬಿಂದುಗಳುಳ್ಳ ರೋಸ್ಟರನ್ನು ಅನುಸರಿಸಿ ಬಡ್ತಿ ನೀಡಬೇಕಾಗಿರುತ್ತದೆ. ಆದರೆ ಸಂಬಂಧಪಟ್ಟ ಸೂಚನೆಗಳನ್ನು ಕೆಲವು ಇಲಾಖೆಗಳು ಸರಿಯಾಗಿ ಪಾಲಿಸುತ್ತಿಲ್ಲವೆಂಬ ಅಂಶ ಸರ್ಕಾರದ ಗಮನಕ್ಕೆ ಬಂದಿರುತ್ತದೆ.

ಇಂತಹ ಪ್ರಕರಣಗಳಿಗೆ ಸಂಬಂಧಿಸಿದಂತೆ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಅರ್ಜಿ ಸಂಖ್ಯೆ : 593/2008 & 4953/2008 ರಲ್ಲಿ ದಿನಾಂಕ 19–01–2010 ರಂದು ತೀರ್ಪು ನೀಡುತ್ತಾ ಈ ಕೆಳಗಿನಂತೆ ಆದೇಶಿಸಿರುತ್ತದೆ :

> "Before parting with the case, we would like to emphasize on the Government that both the Government and the Transport Commissioner have failed to discharge their statutory duty in the matter of maintaining roster pertaining to the cadre of Regional Transport Officers. It is the duty of all authorities competent to order promotions to maintain roster in each cadre. The Government itself has issued directions as long back as 1978 to all authorities competent to order promotions that they shall maintain a separate register indicating the promotional rotation for each category of posts under them. But it is seen that the Government itself has failed to implement its own order. The present case can be only a tip of an iceberg in the State of Karnataka severe action has to be taken against the erring officers/officials. All authorities competent to order promotions may be once again directed to maintain rosters in all cadres. A committee consisting of experts on the subject may be constituted within three months and the committee may be empowered to inspect each and every Department and verify whether the policy of reservation is followed strictly and whether the prescribed percentage is maintained or not. We hope that the Government would rise to the occasion and take remedial measures immediately.

ಆ ಹಿನ್ನೆಲೆಯಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಕಇ 39 ಎಸ್‌ಟಿಸಿ 2010, ಬೆಂಗಳೂರು, ದಿನಾಂಕ : 21–12–2010**

ರಾಜ್ಯ ಸರ್ಕಾರದ ಇಲಾಖೆಗಳು, ಸಾರ್ವಜನಿಕ ಉದ್ದಿಮೆಗಳು, ಸ್ವಾಯತ್ತ ಸಂಸ್ಥೆಗಳು ಹಾಗೂ ಸರ್ಕಾರಿ ಸಂಸ್ಥೆಗಳು ಅವುಗಳ ವ್ಯಾಪ್ತಿಗೆ ಬರುವ ವಿವಿಧ ವೃಂದದ ಅಧಿಕಾರಿ : ನೌಕರರಿಗೆ ಬಡ್ತಿ ನೀಡುವಲ್ಲಿ ಸರ್ಕಾರದ ಆದೇಶ ಸಂಖ್ಯೆ : ಡಿಪಿಎಆರ್ 29 ಎಸ್‌ಡಿಸಿ 77, ದಿನಾಂಕ : 27–04–1978 ಮತ್ತು ತತ್ಸಂಬಂಧವಾಗಿ ನಂತರ ಹೊರಡಿಸಿರುವ ಆದೇಶ ಮತ್ತು ಸುತ್ತೋಲೆಗಳನ್ವಯ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದ ಅಧಿಕಾರಿ/ನೌಕರರುಗಳಿಗೆ ಅನುಕ್ರಮವಾಗಿ ಶೇಕಡ 15 ಮತ್ತು 3ರ ಪ್ರಮಾಣದಲ್ಲಿ ಮೀಸಲಾತಿಯನ್ನು 33 ಬಿಂದು ಪ್ರಕಾರ ಬಡ್ತಿ ನೀಡುತ್ತವೆಯೇ? ಎಂಬುದನ್ನು ದೃಢಪಡಿಸಿಕೊಳ್ಳಲು ಈ ಕೆಳಕಂಡ ಅಧಿಕಾರಿಗಳನ್ನೊಳಗೊಂಡ ಪರಿಣಿತರ ಸಮಿತಿ ರಚಿಸಲಾಗಿದೆ :–

| | | |
|---|---|---|
| (1) | ಜಂಟಿ ನಿರ್ದೇಶಕರು (ಆಡಳಿತ)<br>ಆಯುಕ್ತರು, ಸಮಾಜ ಕಲ್ಯಾಣ ಇವರ ಕಛೇರಿ | ಅಧ್ಯಕ್ಷರು |
| (2) | ಉಪ ನಿರ್ದೇಶಕರು<br>ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆ | ಸದಸ್ಯರು |
| (3) | ಸರ್ಕಾರದ ಅಧೀನ ಕಾರ್ಯದರ್ಶಿ<br>ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವಾ ನಿಯಮಗಳು), ವಿಧಾನಸೌಧ | ಸದಸ್ಯರು |
| (4) | ಉಪ ನಿರ್ದೇಶಕರು (ಉದ್ಯೋಗ ಮತ್ತು ತರಬೇತಿ)<br>ಆಯುಕ್ತರು, ಸಮಾಜ ಕಲ್ಯಾಣ ಇವರ ಕಛೇರಿ | ಸದಸ್ಯ–ಕಾರ್ಯದರ್ಶಿ |

ಸದರಿ ಸಮಿತಿಯು ಕಾಲ ಕಾಲಕ್ಕೆ ವಿವಿಧ ಸರ್ಕಾರಿ ಇಲಾಖೆಗಳು, ಸಾರ್ವಜನಿಕ ಉದ್ದಿಮೆಗಳು, ಸ್ವಾಯತ್ತ ಸಂಸ್ಥೆಗಳು ಹಾಗೂ ಸರ್ಕಾರಿ ಸಂಸ್ಥೆ ಇವುಗಳ ಕೇಂದ್ರ ಕಛೇರಿಗಳಿಗೆ ಭೇಟಿ ನೀಡಿ ಅಂತಹ ಸರ್ಕಾರಿ ಇಲಾಖೆಗಳು, ಉದ್ದಿಮೆಗಳು ಹಾಗೂ ಇತರೆ ಸಂಸ್ಥೆಗಳು ಅವುಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಅಧಿಕಾರಿ/ನೌಕರರಿಗೆ ನಿಗದಿತ ಪ್ರಮಾಣದಲ್ಲಿ ಬಡ್ತಿ ನೀಡಲಾಗುತ್ತಿದೆಯೇ? ಎಂಬುದರ ತನಿಖೆ ನಡೆಸಿ ಕಾಲ ಕಾಲಕ್ಕೆ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ ಇವರಿಗೆ ಇಲಾಖಾ/ಉದ್ದಿಮೆ/ಸಂಸ್ಥೆವಾರು ತನಿಖಾ ವರದಿ ತಯಾರಿಸಿ ಸಲ್ಲಿಸತಕ್ಕದ್ದು.

ಅಂತಹ ಇಲಾಖೆಗಳು/ಉದ್ದಿಮೆಗಳು/ಸಂಸ್ಥೆಗಳು ಅವುಗಳಲ್ಲಿ ಕಾರ್ಯನಿರ್ವಹಿಸುವ ಎಲ್ಲಾ ವೃಂದದ ಅಧಿಕಾರಿ/ನೌಕರರ ಬಡ್ತಿಗೆ ಸಂಬಂಧಿಸಿದ ದಾಖಲಾತಿ ನಿರ್ವಹಿಸತಕ್ಕದ್ದು.

ಸದರಿ ಪರಿಣಿತರ ಸಮಿತಿಯು ಭೇಟಿ ನೀಡುವ ಸಂದರ್ಭಗಳಲ್ಲಿ ಇಲಾಖೆಗಳು/ಸಾರ್ವಜನಿಕ ಉದ್ದಿಮೆಗಳು/ಸಂಸ್ಥೆಗಳು ಅವುಗಳಿಗೆ ಸಂಬಂಧಿಸಿದ ವೃಂದ ಮತ್ತು ನೇಮಕಾತಿ ನಿಯಮಗಳು, ಅವುಗಳಿಗೆ ಕಾಲಕಾಲಕ್ಕೆ ತರಲಾದ ತಿದ್ದುಪಡಿ, ಮುಂಬಡ್ತಿ ನೀಡಲು ಆಧಾರವಾದ ಖಾಲಿ ಹುದ್ದೆಗಳ ವಹಿ, ರೋಸ್ಟರ್ ವಹಿ, ಜೇಷ್ಠತಾ ಪಟ್ಟಿ, ಮುಂಬಡ್ತಿ ಆದೇಶ ಹಾಗೂ ಸಮಿತಿ ಬಯಸುವ ಇನ್ನಿತರೆ ದಾಖಲೆಗಳನ್ನು ವೃಂದವಾರು ನಿರ್ವಹಿಸಿ ಒದಗಿಸತಕ್ಕದ್ದು.

ಅದಲ್ಲದೆ ಬಡ್ತಿ ವಿಷಯದಲ್ಲಿ ಪರಿಣಿತರ ಸಮಿತಿಯು ನೀಡುವ ಸಲಹೆ ಹಾಗೂ ಸೂಚನೆಗಳನ್ನು ಸಂಬಂಧಪಟ್ಟ ಇಲಾಖೆಗಳು/ಸಾರ್ವಜನಿಕ ಉದ್ದಿಮೆಗಳು, ಸ್ವಾಯತ್ತ ಸಂಸ್ಥೆಗಳು ಹಾಗೂ ಇತರೆ ಸಂಸ್ಥೆಗಳು ಪಾಲಿಸಿ ಅನುಸರಣಾ ವರದಿಯನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ ಹಾಗೂ ಆಯುಕ್ತರು, ಸಮಾಜ ಕಲ್ಯಾಣ ಇವರಿಗೆ ಕಳುಹಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ಲೋಕನಾಥರಾವ್,**
ಸರ್ಕಾರದ ಅಧೀನ ಕಾರ್ಯದರ್ಶಿ-2,
ಸಮಾಜ ಕಲ್ಯಾಣ ಇಲಾಖೆ.

ಪಿ.ಆರ್. 26

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ :** ಶ್ರೀ ಸಿ. ಜಗದೀಶ್, ಇವರನ್ನು ವಿಶೇಷ ನ್ಯಾಯವಾದಿಯಾಗಿ ನೇಮಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ : 38 ಎಸ್‌ಎಡಿ 2005, ಬೆಂಗಳೂರು, ದಿನಾಂಕ 2-7-2007.

2. ಸೇರ್ಪಡೆ ಆದೇಶ ಸಂಖ್ಯೆ : ಸಕಇ 108 ಎಸ್‌ಎಡಿ 2007, ದಿನಾಂಕ 09-09-2008.

**ಪ್ರಸ್ತಾವನೆ :**

ಸುಳ್ಳು ಜಾತಿ ಪ್ರಮಾಣ ಪತ್ರ ಪಡೆದ ವ್ಯಕ್ತಿಗಳ ವಿರುದ್ಧ ನ್ಯಾಯಾಲಯದಲ್ಲಿ ದಾಖಲಾದ ಪ್ರಕರಣಗಳಲ್ಲಿ ಸರ್ಕಾರದ ಪರವಾಗಿ ವಾದಿಸಲು ಶ್ರೀ ಸಿ. ಜಗದೀಶ್, ಇವರನ್ನು ಈ ಮೇಲೆ (1) ಮತ್ತು (2) ರಲ್ಲಿ ಓದಲಾದ ಆದೇಶಗಳಲ್ಲಿ ವಿಶೇಷ ನ್ಯಾಯವಾದಿಯಾಗಿ ನೇಮಿಸಲಾಗಿದ್ದು ಮೂರು ವರ್ಷಗಳ ಅವಧಿಯು ದಿನಾಂಕ 1-7-2010 ರಂದು ಮುಕ್ತಾಯಗೊಂಡಿರುತ್ತದೆ, ಆದ ಕಾರಣ ಶ್ರೀ ಸಿ. ಜಗದೀಶ್, ಇವರನ್ನು ನಂತರ ಅವಧಿಗೆ ಮುಂದುವರೆಸುವ ನಿಟ್ಟಿನಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಕಇ 57 ಎಸ್‌ಎಡಿ 2010, ಬೆಂಗಳೂರು, ದಿನಾಂಕ : 08-12-2010**

ದಿನಾಂಕ 02-07-2007ರ ಉಲ್ಲೇಖಿತ ಆದೇಶದಲ್ಲಿ ನಮೂದಿಸಲಾದ ಷರತ್ತು ಹಾಗೂ ನಿಬಂಧನೆಗೆ ಒಳಪಟ್ಟು ಶ್ರೀ ಸಿ. ಜಗದೀಶ್, ದಿನಾಂಕ 02-07-2010 ರಿಂದು ಇನ್ನೂ ಮೂರು ವರ್ಷಗಳ ಅವಧಿಗೆ ವಿಶೇಷ ನ್ಯಾಯವಾದಿಯನ್ನಾಗಿ ಮುಂದುವರೆಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ಲೋಕನಾಥರಾವ್,**
ಸರ್ಕಾರದ ಅಧೀನ ಕಾರ್ಯದರ್ಶಿ-2,
ಸಮಾಜ ಕಲ್ಯಾಣ ಇಲಾಖೆ.

ಪಿ.ಆರ್. 27

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ :** ಡಾ॥ ಬಿ.ಆರ್. ಅಂಬೇಡ್ಕರ್ ಮತ್ತು ಡಾ॥ ಬಾಬು ಜಗಜೀವನ ರಾಂ ಪ್ರಶಸ್ತಿ ನೀಡುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ : ಸಕಇ 92 ಪಕವಿ 2007, ದಿನಾಂಕ 14-03-2007.

2. ದಿನಾಂಕ 01-04-2010 ಹಾಗೂ 05-04-2010 ರಂದು ನಡೆದ ಡಾ॥ ಬಾಬು ಜಗಜೀವನ ರಾಂ ಮತ್ತು ಡಾ॥ ಬಿ.ಆರ್. ಅಂಬೇಡ್ಕರ್ ಪ್ರಶಸ್ತಿ ಸಮಿತಿ ಸಭೆಯ ನಡವಳಿ.

3. ಪತ್ರ ಸಂಖ್ಯೆ : ಸಕನಿ/ಸಿಬ್ಬಂದಿ-6/ಬಾಜಜೀ-ಅಂ.ಪ್ರಶಸ್ತಿ/10-11, ದಿನಾಂಕ 18.8.2010.

**ಪ್ರಸ್ತಾವನೆ :**

ಸಾಮಾಜಿಕ ಕ್ಷೇತ್ರದಲ್ಲಿ ಅದರಲ್ಲೂ ಪ್ರಮುಖವಾಗಿ ಪರಿಶಿಷ್ಟ ಜಾತಿ/ಪರಿಶಿಷ್ಟ ವರ್ಗದ ಜನಾಂಗದ ಏಳಿಗೆ, ಅಸ್ಪೃಶ್ಯತೆ ನಿರ್ಮೂಲನ ಹಾಗೂ ದೌರ್ಜನ್ಯ ತಡೆಯುವ ಚಟುವಟಿಕೆಗಳಲ್ಲಿ ಸ್ವಯಂ ಪ್ರೇರಣೆಯಿಂದ ನಿರಂತರವಾಗಿ ತೊಡಗಿಸಿಕೊಂಡು ಶ್ರಮಿಸುವ ವ್ಯಕ್ತಿಗಳನ್ನು ಗುರುತಿಸಿ ಡಾ॥ ಬಿ.ಆರ್. ಅಂಬೇಡ್ಕರ್ ಹಾಗೂ ಡಾ॥ ಬಾಬು ಜಗಜೀವನ ರಾಂ ಇವರ ಸ್ಮರಣಾರ್ಥ ಪ್ರತಿ ವರ್ಷ ಐದ್ಯೆದು ವ್ಯಕ್ತಿಗಳಿಗೆ ಪ್ರಶಸ್ತಿ ನೀಡಲಾಗುತ್ತಿದೆ. ಉಲ್ಲೇಖಿತ ಪ್ರಶಸ್ತಿಗಳಿಗೆ ವ್ಯಕ್ತಿಗಳನ್ನು ಆಯ್ಕೆ ಮಾಡುವಲ್ಲಿ ನಿಗದಿತ ಕಾರ್ಯವಿಧಾನ ಅನುಸರಿಸುವ ಅವಶ್ಯಕತೆ ಇರುತ್ತದೆ.

ಆ ಹಿನ್ನೆಲೆಯಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಕಇ 239 ಪಕಸೇ 2010, ಬೆಂಗಳೂರು, ದಿನಾಂಕ : 07-12-2010**

ಡಾ॥ ಬಿ.ಆರ್. ಅಂಬೇಡ್ಕರ್ ಹಾಗೂ ಡಾ॥ ಬಾಬು ಜಗಜೀವನ ರಾಂ ಇವರ ಸ್ಮರಣಾರ್ಥ ಪ್ರಶಸ್ತಿ ನೀಡುವಲ್ಲಿ ಈ ಕೆಳಕಂಡ ಮಾರ್ಗಸೂಚಿಗಳನ್ನು ಅನುಸರಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ:-

1) ಯಾವುದೇ ವ್ಯಕ್ತಿ ಒಂದು ಪ್ರಶಸ್ತಿಗೆ ಮಾತ್ರ ಅರ್ಜಿ ಸಲ್ಲಿಸತಕ್ಕದ್ದು.

2) ಅರ್ಜಿದಾರರ ವಯಸ್ಸು ಕನಿಷ್ಠ 35 ವರ್ಷಗಳಾಗಿರತಕ್ಕದ್ದು.

3) ಯಾವುದೇ ವ್ಯಕ್ತಿಯನ್ನು ಒಂದು ಪ್ರಶಸ್ತಿಗೆ ಮಾತ್ರ ಆಯ್ಕೆ ಮಾಡತಕ್ಕದ್ದು.

4) ಪ್ರಶಸ್ತಿಗೆ ಯಾವುದೇ ಜನಾಂಗದ ವ್ಯಕ್ತಿ ಅರ್ಜಿ ಸಲ್ಲಿಸಬಹುದು.

5) ಡಾ॥ ಬಿ.ಆರ್. ಅಂಬೇಡ್ಕರ್ ಅವರ ಪ್ರಶಸ್ತಿಯನ್ನು ಗರಿಷ್ಠ 10 ಜನರಿಗೆ ಮತ್ತು ಡಾ॥ ಬಾಬು ಜಗಜೀವನ ರಾಂ ಪ್ರಶಸ್ತಿಯನ್ನು ಗರಿಷ್ಠ 10 ಜನರಿಗೆ ನೀಡಲಾಗುವುದು.

6) ಅಂತಹ ಪ್ರಶಸ್ತಿಗಳನ್ನು ಕ್ರಮವಾಗಿ ಡಾ॥ ಬಿ.ಆರ್. ಅಂಬೇಡ್ಕರ್ ಹಾಗೂ ಡಾ॥ ಬಾಬು ಜಗಜೀವನ ರಾಂ ಇವರ ಜನ್ಮ ದಿನಾಚರಣೆ ಸಮಾರಂಭದಲ್ಲಿ ಪ್ರಧಾನ ಮಾಡಲಾಗುವುದು.

7) ಪ್ರಶಸ್ತಿಯು ಪ್ರಶಂಸಾ ಪತ್ರ, ಸಾಲು, ಗಂಧದಹಾರ, ಫಲಪುಷ್ಪ ಹಾಗೂ ರೂ. 25,000.00 ಮೊತ್ತದ ನಗದನ್ನು ಒಳಗೊಂಡಿರುತ್ತದೆ.

8) ಪ್ರಶಸ್ತಿಗೆ ಅರ್ಜಿ ಸಲ್ಲಿಸುವ ವ್ಯಕ್ತಿಯು ಯಾವುದೇ ಕಾನೂನು ಬಾಹಿರ ಚಟುವಟಿಕೆಗಳಲ್ಲಿ ತೊಡಗಿರತಕ್ಕದ್ದಲ್ಲ.

9) ಮೊದಲನೇ ಹಂತದಲ್ಲಿ ಅರ್ಜಿಗಳನ್ನು ಸಂಬಂಧಪಟ್ಟ ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿ ಹಾಗೂ ಜಿಲ್ಲಾಧಿಕಾರಿ ಇವರಿಗೆ ಸಲ್ಲಿಸಬೇಕು. ಅಂತಹ ಅರ್ಜಿಗಳನ್ನು, ಜಿಲ್ಲಾಧಿಕಾರಿಗಳು ಅವರ ಹಂತದಲ್ಲಿ ಪರಿಶೀಲಿಸಿ ಸೂಕ್ತ ವ್ಯಕ್ತಿಗಳನ್ನು ಗುರುತಿಸಿ ಪ್ರತಿ ಜಿಲ್ಲೆಗೆ ಒಬ್ಬರಂತೆ (ಒಂದು ಪಕ್ಷ, ಒಂದೇ ಜಿಲ್ಲೆಯಲ್ಲಿ ಒಂದಕ್ಕಿಂತ ಹೆಚ್ಚು ಅರ್ಹ ವ್ಯಕ್ತಿಗಳು ಇದ್ದಲ್ಲಿ ವಯಸ್ಸಿನ ಆಧಾರದ ಮೇಲೆ) ಶಿಫಾರಸ್ಸು ಮಾಡಿ ಡಿಸೆಂಬರ್ ಅಂತ್ಯದೊಳಗೆ ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ, ಬೆಂಗಳೂರು ಇವರಿಗೆ ಕಳುಹಿಸಿಕೊಡತಕ್ಕದ್ದು.

10) ರಾಜ್ಯ ಮಟ್ಟದಲ್ಲಿ ಸಾಮಾಜಿಕ ಸೇವೆ ಸಲ್ಲಿಸುತ್ತಿರುವ ಅರ್ಹ ವ್ಯಕ್ತಿಗಳು ನೇರವಾಗಿ ಅರ್ಜಿಗಳನ್ನು ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ, ಬೆಂಗಳೂರು ಇವರಿಗೆ ಸಲ್ಲಿಸಬಹುದು.

11) ಎರಡನೇ ಹಂತದಲ್ಲಿ ಜಿಲ್ಲಾಧಿಕಾರಿಗಳಿಂದ ಶಿಫಾರಸ್ಸಾದಂತಹ ಅರ್ಜಿಗಳು ಹಾಗೂ ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ, ಇವರಿಗೆ ನೇರವಾಗಿ ಸಲ್ಲಿಸಲ್ಪಟ್ಟ ಎಲ್ಲಾ ಅರ್ಜಿಗಳನ್ನು ಆಯುಕ್ತರು ಪರಿಶೀಲಿಸಿ ಪ್ರಶಸ್ತಿಗೆ ಅರ್ಹರೆಂದು ಕಂಡುಬರುವ ವ್ಯಕ್ತಿಗಳ ಪಟ್ಟಿಯನ್ನು ಜನವರಿ ತಿಂಗಳ ಅಂತ್ಯದೊಳಗೆ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

12) ಅಂತಹ ಅರ್ಜಿಗಳನ್ನು ಪರಿಶೀಲಿಸಿ ಅಂತಿಮ ನಿಲುವು ತಾಳಲು ಈ ಕೆಳಕಂಡ ಸಮಿತಿ ರಚಿಸಲಾಗಿದೆ :–

| | | |
|---|---|---|
| 1 | ಸರ್ಕಾರದಿಂದ ನಾಮ ನಿರ್ದೇಶನ ಮಾಡಲ್ಪಟ್ಟ ತಜ್ಞರು | ಅಧ್ಯಕ್ಷರು |
| 2 | ಸರ್ಕಾರದಿಂದ ಕಾಲಕಾಲಕ್ಕೆ ನಾಮ ನಿರ್ದೇಶನ ಮಾಡಲ್ಪಟ್ಟ ಇಬ್ಬರು ವ್ಯಕ್ತಿಗಳು | ಸದಸ್ಯರು |
| 3 | ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ | ಸದಸ್ಯರು |
| 4 | ನಿರ್ದೇಶಕರು, ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆ | ಸದಸ್ಯರು |
| 5 | ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ | ಸದಸ್ಯರು |
| 6 | ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ | ಸದಸ್ಯರು |
| 7 | ಜಂಟಿ ನಿರ್ದೇಶಕರು (ಆಡಳಿತ), ಸಮಾಜ ಕಲ್ಯಾಣ ಇಲಾಖೆ | ಸದಸ್ಯ–ಕಾರ್ಯದರ್ಶಿ |

13) ಈ ಪ್ರಶಸ್ತಿಗಳಿಗೆ ವ್ಯಕ್ತಿಗಳನ್ನು ಆಯ್ಕೆ ಮಾಡುವಲ್ಲಿ ಸಮಿತಿಯು ಈ ಕೆಳಗಿನ ಅಂಶಗಳನ್ನು ಗಮನದಲ್ಲಿಟ್ಟುಕೊಳ್ಳತಕ್ಕದ್ದು:–

1) ಪ್ರಶಸ್ತಿಗೆ ಆಯ್ಕೆ ಮಾಡುವ ವ್ಯಕ್ತಿಯು ಸಾಮಾಜಿಕ ಕ್ಷೇತ್ರದಲ್ಲಿ ಮುಖ್ಯವಾಗಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಜನರಿಗೆ ಸೇವೆ ಸಲ್ಲಿಸಿದ ವ್ಯಕ್ತಿಯಾಗಿದ್ದು ಜನಸಾಮಾನ್ಯರಲ್ಲಿ ಸ್ವಯಂ ಸೇವಕರಾಗಿ ಮಾನ್ಯತೆ, ಕೀರ್ತಿ/ಪ್ರಖ್ಯಾತಿ ಹೊಂದಿರಬೇಕು. ಅವರು ಸಾಧನೆ ಮಾಡಿರುವ ಸಾಧನೆಗಳ ಬಗ್ಗೆ ದಾಖಲಾತಿ ಹೊಂದಿರಬೇಕು. ಪ್ರಮುಖವಾಗಿ ಪರಿಶಿಷ್ಟ ಜಾತಿ/ ಪರಿಶಿಷ್ಟ ವರ್ಗದವರ ಶೈಕ್ಷಣಿಕ ಪ್ರಗತಿ ಹಾಗೂ ಆರ್ಥಿಕವಾಗಿ ಸಧೃಡಗೊಳಿಸಲು ಸ್ವಯಂ ಪ್ರೇರಣೆಯಿಂದ ದುಡಿಯುವ ವ್ಯಕ್ತಿಯಾಗಿರಬೇಕು.

2) ಪರಿಶಿಷ್ಟ ಜಾತಿಯವರು ಎದುರಿಸುತ್ತಿರುವ ಅಸ್ಪೃಶ್ಯತೆ ಹಾಗೂ ಅವರ ಮೇಲೆ ನಡೆಯುವ ದೌರ್ಜನ್ಯ ಇವುಗಳ ನಿರ್ಮೂಲನೆ ಹಾಗೂ ಸಮಾಜದಲ್ಲಿ ಸಾಮರಸ್ಯ ವಾತಾವರಣ ಮೂಡಿಸುವುದು ಅಥವಾ ಅಂತಹ ದೌರ್ಜನ್ಯ ನಿಯಂತ್ರಿಸಲು ಸಹಕಾರಿಯಾಗುವ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡು ಶ್ರಮಿಸುವ ವ್ಯಕ್ತಿಯಾಗಿರಬೇಕು.

3) ಡಾ॥ ಬಿ.ಆರ್. ಅಂಬೇಡ್ಕರ್ ಮತ್ತು ಡಾ॥ ಬಾಬು ಜಗಜೀವನ ರಾಂ ಇವರ ತತ್ವ ಹಾಗೂ ಆದರ್ಶಗಳನ್ನು ಸಾಕಾರಗೊಳಿಸುವಂತಹ ಯಾವುದೇ ಕ್ಷೇತ್ರದಲ್ಲಿ ತೊಡಗಿಸಿಕೊಂಡು ಪರಿಶಿಷ್ಟ ಜಾತಿ/ ಪರಿಶಿಷ್ಟ ವರ್ಗದ ಜನರನ್ನು ಸಮಾಜದ ಮುಖ್ಯ ವಾಹಿನಿಗೆ ತರುವ ನಿಟ್ಟಿನಲ್ಲಿ ಶ್ರಮಿಸುವ ವ್ಯಕ್ತಿಯಾಗಿರಬೇಕು.

14) ಸದರಿ ಸಮಿತಿಯು ಫೆಬ್ರವರಿ/ಮಾರ್ಚಿ ತಿಂಗಳ ಒಳಗಾಗಿ ಆಯ್ಕೆ ಪ್ರಕ್ರಿಯೆ ಮುಗಿಸಿ ಅರ್ಹ ವ್ಯಕ್ತಿಗಳ ಪಟ್ಟಿಯನ್ನು ಶಿಫಾರಸ್ಸಿನೊಂದಿಗೆ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

15) ಈ ಕುರಿತಂತೆ ಸರ್ಕಾರ ತೆಗೆದುಕೊಳ್ಳುವ ತೀರ್ಮಾನವೇ ಅಂತಿಮವಾಗಿರುತ್ತದೆ.

16) ಆ ಸಂಬಂಧದ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2225–01–102–0–09 ಹಾಗೂ ಪ್ರತಿ ವರ್ಷ ಪರಿಶಿಷ್ಟ ಜಾತಿ ಕ್ರೋಢೀಕೃತ ಯೋಜನೆ ಇವುಗಳ ಅಡಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಲೋಕನಾಥರಾವ್,**

ಸರ್ಕಾರದ ಅಧೀನ ಕಾರ್ಯದರ್ಶಿ–2,

ಸಮಾಜ ಕಲ್ಯಾಣ ಇಲಾಖೆ.

**ಡಾ॥ ಬಿ.ಆರ್. ಅಂಬೇಡ್ಕರ್ ಹಾಗೂ ಡಾ॥ ಬಾಬು ಜಗಜೀವನ ರಾಂ ರವರ ಪ್ರಶಸ್ತಿ ಬಗ್ಗೆ ಅರ್ಜಿ**

| | | |
|---|---|---|
| 1 | ಹೆಸರು | |
| 2 | ಲಿಂಗ : ಸ್ತ್ರೀ/ಪುರುಷ | |
| 3 | ಹುಟ್ಟಿದ ದಿನಾಂಕ, ವಯಸ್ಸು | |
| 4 | ಹುಟ್ಟಿದ ಸ್ಥಳ (ಗೊತ್ತಿದ್ದಲ್ಲಿ) | |
| 5 | ರಾಷ್ಟ್ರೀಯತೆ | |
| 6 | ಅಂಚೆ ವಿಳಾಸ<br>ದೂರವಾಣಿ ಸಂಖ್ಯೆ :<br>ಇ–ಮೇಲ್ ವಿಳಾಸ ಇತ್ಯಾದಿ | |
| 7 | ಧರ್ಮ | |
| 8 | ಜಾತಿ<br>(ಪ.ಜಾತಿ/ಪ.ವರ್ಗ/ಇತರೆ/ಸಾಮಾನ್ಯ) | |
| 9 | ಉದ್ಯೋಗ<br>(ಪದನಾಮ/ಕಛೇರಿಯ ವಿಳಾಸ) | |
| 10 | ಕ್ರಿಯೆ/ಸಾಧನೆಯ ಕ್ಷೇತ್ರ<br>ಕಲೆ/ಕ್ರೀಡೆ/ಸಾಮಾಜಿಕ ಕಾರ್ಯ/ಇತ್ಯಾದಿ | |
| 11 | ಡಾ॥ ಬಿ.ಆರ್. ಅಂಬೇಡ್ಕರ್ / ಡಾ॥ ಬಾಬು ಜಗಜೀವನ ರಾಂ ಪ್ರಶಸ್ತಿ | |
| 12 | ಈ ಹಿಂದೆ ಪಡೆದ ಪ್ರಶಸ್ತಿಗಳ ವಿವರ | |
| 13 | ಪ.ಜಾತಿ/ಪ.ವರ್ಗದ ಜನಾಂಗದವರ ಶ್ರೇಯಸ್ಸಿಗಾಗಿ ಪ್ರೋತ್ಸಾಹಿಸಿ ಶ್ರಮಿಸಿದವರ ಸವಿವರವಾದ ವಿವರ ಹಾಗೂ ಪೂರಕ ದಾಖಲಾತಿಗಳನ್ನು ಅರ್ಜಿಯೊಂದಿಗೆ ಲಗತ್ತಿಸಿ ಕಳುಹಿಸುವುದು | |

ಪಿ.ಆರ್. 28

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಬಳ್ಳಾರಿ ಸ್ಥಳೀಯ ಯೋಜನಾ ಪ್ರದೇಶಕ್ಕೆ ಮಹಾ ಯೋಜನೆ (ಪರಿಷ್ಕೃತ–1) ನ್ನು ಸರ್ಕಾರದ ಅಂತಿಮ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ : ನಅಇ 214 ಬೆಮಪ್ರಾ 2008, ದಿ: 28–08–2008.

**2.** ಸರ್ಕಾರಿ ಆದೇಶ ಸಂಖ್ಯೆ : ನಅಇ 196 ಬೆಮಪ್ರಾ 2008, ದಿ: 15–12–2008.

**3.** ಆಯುಕ್ತರು, ನಗರಾಭಿವೃದ್ಧಿ ಪ್ರಾಧಿಕಾರ, ಬಳ್ಳಾರಿ ಇವರ ಪತ್ರ ಸಂಖ್ಯೆ : ಬನಪ್ರಾ:ಮಾ.ಪ್ಲಾ (ಪರಿಷ್ಕೃತ–1) (ರಿ) 2006–07/2431, ದಿನಾಂಕ 23–3–2010.

**4.** ನಿರ್ದೇಶಕರು, ನಗರ ಮತ್ತು ಗ್ರಾಮಾಂತರ ಯೋಜನಾ ಇಲಾಖೆ, ಇವರ ಏಕ ಕಡತ ಸಂಖ್ಯೆ : ನಗ್ರಾಯೋ:7: ಉನಿ (ಯೋವಿ): ಬಳ್ಳಾರಿ : ಮ.ಯೋ: (ಪ–1) : ಅಂತಿಮ : 2010 ದಿನಾಂಕ : 10–05–2010 ಮತ್ತು 10–11–2010 ರಲ್ಲಿ ನೀಡಿರುವ ಅಭಿಪ್ರಾಯ.

**5.** ಜಿಲ್ಲಾ ಉಸ್ತುವಾರಿ ಸಚಿವರು ಬಳ್ಳಾರಿ ಹಾಗೂ ಪ್ರವಾಸೋದ್ಯಮ ಮತ್ತು ಮೂಲಭೂತ ಸೌಕರ್ಯ ಅಭಿವೃದ್ಧಿ ಸಚಿವರ ನಡವಳಿ, ದಿನಾಂಕ 7–6–2010.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮಾಂಕ (1) ರ ಸರ್ಕಾರದ ಆದೇಶದಲ್ಲಿ ಬಳ್ಳಾರಿ ನಗರದ ಸ್ಥಳೀಯ ಯೋಜನಾ ಪ್ರದೇಶಕ್ಕೆ ತಯಾರಿಸಲಾದ ಮಹಾ ಯೋಜನೆ ಪರಿಷ್ಕೃತ–1 ಕ್ಕೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 61ರ ಕಲಂ 13(1) ರನ್ವಯ ಸರ್ಕಾರದ ತಾತ್ಕಾಲಿಕ ಅನುಮೋದನೆಯನ್ನು ನೀಡಲಾಗಿದೆ. ಕ್ರಮಾಂಕ (2)ರ ಆದೇಶದಲ್ಲಿ ಸರ್ಕಾರವು ಬಳ್ಳಾರಿ–ಸಂಡೂರು ಸ್ಥಳೀಯ ಯೋಜನಾ ಪ್ರದೇಶವನ್ನು ಉಪವಿಭಜನೆ ಮಾಡಿ ಒಟ್ಟು 31 ಗ್ರಾಮಗಳನ್ನು ವಿಜಯನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರ ರಚನೆ ಮಾಡಿ, ಸದರಿ ಪ್ರದೇಶಕ್ಕೆ ಸೇರಿಸಿ ಉಳಿದ ಪ್ರದೇಶವನ್ನು ಬಳ್ಳಾರಿ ಸ್ಥಳೀಯ ಯೋಜನಾ ಪ್ರದೇಶವೆಂದು ಘೋಷಿಸಿದೆ. ಆದ್ದರಿಂದ, ಬಳ್ಳಾರಿ ಸ್ಥಳೀಯ ಯೋಜನಾ ಪ್ರದೇಶವು 18 ಗ್ರಾಮಗಳನ್ನೊಳಗೊಂಡು ಕ್ಷೇತ್ರ ರೂ.267.25 ಚದುರ ಕಿ.ಮೀಟರ್ ಆಗಿದ್ದು, ಈ ಪ್ರದೇಶಕ್ಕೆ ಅಂತಿಮ ಮಹಾಯೋಜನೆಯನ್ನು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ

ಕಾಯ್ದೆ 1961ರ ಕಲಂ 13(1) ರನ್ವಯ ಕ್ರಮ ಜರುಗಿಸಿ, ಉಲ್ಲೇಖ (3)ರ ಪತ್ರದಲ್ಲಿ ಬಳ್ಳಾರಿ ನಗರಾಭಿವೃದ್ಧಿ ಪ್ರಾಧಿಕಾರವು ಪ್ರಸ್ತಾವನೆಯನ್ನು ನಿರ್ದೇಶಕರು, ನಗರ ಮತ್ತು ಗ್ರಾಮಾಂತರ ಯೋಜನಾ ಇಲಾಖೆ ಇವರ ಮುಖಾಂತರ ಸರ್ಕಾರದ ಅಂತಿಮ ಅನುಮೋದನೆಗಾಗಿ ಸಲ್ಲಿಸಿರುತ್ತಾರೆ.

ಪರಶೀಲಿಸಿದಂತೆ, ಪ್ರಾಧಿಕಾರವು ತಾತ್ಕಾಲಿಕ ಅನುಮೋದನೆಗೊಂಡಿರುವ ಮಹಾಯೋಜನೆ ಪರಿಷ್ಕೃತ–1ರ ಕುರಿತಂತೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 13(1) ರನ್ವಯ ಕ್ರಮ ಜರುಗಿಸಿ ಸಾರ್ವಜನಿಕ ಸಲಹೆ/ಆಕ್ಷೇಪಣೆಗಳನ್ನು ಆಹ್ವಾನಿಸಿ ಪತ್ರಿಕಾ ಪ್ರಕಟಣೆಗಳನ್ನು ಮತ್ತು ದಿನಾಂಕ 2–10–2008ರ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆ ಹೊರಡಿಸಲಾಗಿದೆ. ಅದರನ್ವಯ ನಿಗಧಿತ ಅವಧಿಯಲ್ಲಿ ಸ್ವೀಕರಿಸಲಾದ 609 ಆಕ್ಷೇಪಣೆಗಳನ್ನು ಪರಿಶೀಲಿಸಿ, ಸರ್ಕಾರದ ಇತ್ತೀಚಿನ ಆದೇಶದಂತೆ ಮಹಾ ಯೋಜನೆಯನ್ನು ಮಹಾನಗರಪಾಲಿಕೆ, ಬಳ್ಳಾರಿ ಇವರಿಗೆ ಕಳುಹಿಸಿ, ಸದರಿಯವರಿಂದ ಆಕ್ಷೇಪಣೆಗಳನ್ನು ಆಹ್ವಾನಿಸಿ, ದಿನಾಂಕ 22–2–2010 ರಂದು ನಡೆದ ಬಳ್ಳಾರಿ ಮಹಾನಗರಪಾಲಿಕೆ ಸಾಮಾನ್ಯ ಸಭೆಯಲ್ಲಿ ಮಹಾ ಯೋಜನೆ ಪರಿಷ್ಕೃತ–1 ಕ್ಕೆ ಯಾವುದೇ ಆಕ್ಷೇಪಣೆಗಳನ್ನು ವ್ಯಕ್ತಪಡಿಸಿರುವುದಿಲ್ಲವೆಂದು ಮತ್ತು ಸಾರ್ವಜನಿಕರಿಂದ ಸ್ವೀಕರಿಸಿದ ಆಕ್ಷೇಪಣೆಗಳನ್ನು ಪ್ರಾಧಿಕಾರವು ದಿನಾಂಕ 24–9–2009 ರಂದು ನಡೆದ ಪ್ರಾಧಿಕಾರದ ಸಭೆಯಲ್ಲಿ ಮಂಡಿಸಿ, ತೆಗೆದುಕೊಂಡ ತೀರ್ಮಾನದನ್ವಯ ಮಹಾಯೋಜನೆಯಲ್ಲಿ ಸೂಕ್ತ ಮಾರ್ಪಾಡುಗಳನ್ನು ಮಾಡಿ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 13(2) ರನ್ವಯ ಸರ್ಕಾರದ ಅಂತಿಮ ಅನುಮೋದನೆ ಸಲ್ಲಿಸಲು ತೀರ್ಮಾನಿಸಿ, ಪ್ರಸ್ತಾವನೆಯನ್ನು ಸರ್ಕಾರಕ್ಕೆ ಕಳುಹಿಸಿಕೊಡಲಾಗಿದೆ.

ಸದರಿ ಪ್ರಸ್ತಾವನೆಯಲ್ಲಿ ಬಳ್ಳಾರಿ ನಗರದ ಜನಸಂಖ್ಯೆಯು 2021 ರಲ್ಲಿ 760,000 ಗಳಷ್ಟು ಆಗಬಹುದೆಂದು ನಿರೀಕ್ಷಿಸಿ ಮಹಾಯೋಜನೆಯನ್ನು ತಯಾರಿಸಿದ್ದು, ಸ್ಥಳೀಯ ಯೋಜನಾ ಪ್ರದೇಶದ ಒಟ್ಟು 15,023.67 ಹೆಕ್ಟೇರ್ ಪ್ರದೇಶವನ್ನು ನಗರದ ಅಭಿವೃದ್ಧಿಗಾಗಿ ನಗರೀಕರಣ ಎಲ್ಲೆಯೆಂದು ಪ್ರಸ್ತಾಪಿಸಿ, ಪರಿಷ್ಕೃತ–1ರ ಮಹಾಯೋಜನೆಯಲ್ಲಿ ರೂಪಿಸಲಾಗಿದೆ. ಬಳ್ಳಾರಿ ಜನಸಂಖ್ಯೆಯ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿ ಹಾಲಿ ಬೆಳವಣಿಗೆಗಳ ಗತಿ, ಹವಾಗುಣ ರಸ್ತೆಗಳ ಹಾಲಿ ಪರಿಚಲನೆ, ವ್ಯವಸ್ಥೆಯ ಸಮಸ್ಯೆಗಳನ್ನು ವಿಶ್ಲೇಷಿಸಿ, ಯೋಜನಾ ತತ್ವಗಳಿಗೆ ಅನುಗುಣವಾಗಿ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 12ರಲ್ಲಿ ನಿಗದಿಪಡಿಸಿರುವ ಅಂಶಗಳನ್ನು ಪರಿಗಣಿಸಿ, ಪಟ್ಟಣದ ಬೆಳವಣಿಗೆಗೆ ವಿವಿಧ ಉಪಯೋಗಗಳಿಗೆ ಬೇಕಾಗಬಹುದಾದ ಭೂಮಿಯನ್ನು ಈ ಕೆಳಗಿನಂತೆ ಕಾಯ್ದಿರಿಸಿ ಪರಿಷ್ಕೃತ–1ರ ಯೋಜನೆಯನ್ನು ತಯಾರಿಸಲಾಗಿದೆ.

ಪಟ್ಟಣದ ಯೋಜಿತ ಬೆಳವಣಿಗೆಗಾಗಿ ಪ್ರಸ್ತಾಪಿಸಿರುವ 15023.67 ಹೆಕ್ಟೇರ್ ಪ್ರದೇಶದಲ್ಲಿ ವಸತಿಗಾಗಿ 5953.38 ಹೆಕ್ಟೇರ್ ಶೇ. 39.63, ವಾಣಿಜ್ಯಕ್ಕಾಗಿ 787.04 ಹೆಕ್ಟೇರ್ ಶೇ. 5.24, ಕೈಗಾರಿಕೆಗಾಗಿ 3599.06 ಹೆಕ್ಟೇರ್ ಶೇ. 23.96, ಸಾರ್ವಜನಿಕ ಅರೆ ಸಾರ್ವಜನಿಕ ಉಪಯೋಗಕ್ಕೆ 769.86 ಹೆಕ್ಟೇರ್, ಶೇ. 5.12, ಉದ್ಯಾನವನ ಮತ್ತು ಬಯಲು ಜಾಗಕ್ಕಾಗಿ 1706.51 ಹೆಕ್ಟೇರ್ ಶೇ. 11.38 ಹಾಗೂ ಸಾರಿಗೆ/ಸಂಪರ್ಕ ವಲಯಕ್ಕೆ 1950.05 ಹೆಕ್ಟೇರ್ ಶೇ. 12.98, ನಾಗರೀಕ ಸೌಲಭ್ಯಕ್ಕಾಗಿ 179.31 ಹೆಕ್ಟೇರ್ ಶೇ. 1.19, ಪುರಾತತ್ವ ಸ್ಮಾರಕಕ್ಕಾಗಿ 75.46 ಹೆಕ್ಟೇರ್ ಶೇ. 0.50 ಪ್ರದೇಶವನ್ನು ನಿಗದಿಪಡಿಸಲಾಗಿದೆ. ಮಹಾ ಯೋಜನೆ ಪರಿಷ್ಕೃತ–1ನ್ನು ಅನುಷ್ಠಾನಕ್ಕೆ ತರಲು ಅಗತ್ಯವಿರುವ ವಲಯ ನಿಯಮಾವಳಿಗಳನ್ನು ರೂಪಿಸಲಾಗಿದೆ.

ಮೇಲೆ ಓದಲಾದ ಕ್ರಮಾಂಕ–5ರ ನಡುವಳಿಯಲ್ಲಿ ಬಳ್ಳಾರಿ ನಗರದ ಮಾಸ್ಟರ್ ಪ್ಲಾನ್‌ನಲ್ಲಿ ಘನ ತ್ಯಾಜ್ಯ ವಸ್ತು ನಿರ್ವಹಣೆಗಾಗಿ ಸುಮಾರು 60 ಎಕರೆ ಜಮೀನನ್ನು ಪಬ್ಲಿಕ್ ಯುಟಿಲಿಟಿ ವಲಯಕ್ಕಾಗಿ ಅಳವಡಿಸಿರುವುದನ್ನು ಮಹಾನಗರಪಾಲಿಕೆ ರವರು ಸದರಿ ಜಮೀನನ್ನು ವಸತಿ ಉದ್ದೇಶಕ್ಕಾಗಿ ಬಳಸಲು ಉದ್ದೇಶಿಸಿದ್ದು, ಘನ ತ್ಯಾಜ್ಯ ವಸ್ತು ನಿರ್ವಹಣೆಗಾಗಿ ನಗರ ಹೊರ ಪ್ರದೇಶದಲ್ಲಿ ಪ್ರತ್ಯೇಕವಾಗಿ 80 ಎಕರೆ ಜಮೀನನ್ನು ಖರೀದಿಸಿರುವ ಪ್ರಯುಕ್ತ ಸದರಿ 60 ಎಕರೆ ಜಮೀನನ್ನು ವಸತಿ ಉದ್ದೇಶಕ್ಕಾಗಿ ಮಾಸ್ಟರ್ ಪ್ಲಾನ್ ನಲ್ಲಿ ಸೇರ್ಪಡೆಗೊಳಿಸಲು ಹಾಗೂ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿರವರು ಬಳ್ಳಾರಿ ಜಿಲ್ಲೆಯ ಕೊಳಗಲ್ಲು ಗ್ರಾಮದ ಸರ್ವೆ ನಂಬರುಗಳನ್ನು ಒಳಗೊಂಡ ಜಮೀನುಗಳನ್ನು ಕೆ.ಐ.ಎ.ಡಿ.ಬಿ., ಕಾಯ್ದೆ 1966ರ ಕಲಂ 3(1)ರ ಪ್ರಕಾರ ಕೈಗಾರಿಕಾ ಉದ್ದೇಶಕ್ಕಾಗಿ ಭೂಸ್ವಾಧೀನ ಮಾಡಲು ಅಧಿಸೂಚನೆ ಹೊರಡಿಸಿದ್ದು, ಸದರಿ ಜಮೀನುಗಳನ್ನು ಈಗಾಗಲೇ ನಗರಾಭಿವೃದ್ಧಿ ಪ್ರಾಧಿಕಾರದ ಮಾಸ್ಟರ್ ಪ್ಲಾನ್‌ನಲ್ಲಿ ಕೃಷಿ/ಸಾರ್ವಜನಿಕ/ವಸತಿ ಉದ್ದೇಶಕ್ಕಾಗಿ ಕಾಯ್ದಿರಿಸಿದ್ದು, ಸದರಿ ಜಮೀನನ್ನು ಕೆ.ಐ.ಎ.ಡಿ.ಬಿ., ರವರು ಈಗಾಗಲೇ ಹೊರಡಿಸಿರುವ ಅಧಿಸೂಚನೆಯಂತೆ ಕೈಗಾರಿಕಾ ಉದ್ದೇಶಕ್ಕಾಗಿ ಭೂ ಉಪಯೋಗ ಬದಲಾವಣೆ ಮಾಡಿ ಮಾಸ್ಟರ್‌ಪ್ಲಾನ್ ನಲ್ಲಿ ಸೇರಿಸಲು ಸರ್ಕಾರವನ್ನು ಕೋರಿರುತ್ತಾರೆ.

ಸರ್ಕಾರವು ಮೇಲ್ಕಂಡ ವಿಷಯವನ್ನು ಪರಿಶೀಲಿಸಿ, ಪ್ರಾಧಿಕಾರವು ನಿರ್ದೇಶಕರು, ನಗರ ಮತ್ತು ಗ್ರಾಮಾಂತರ ಯೋಜನಾ ಇಲಾಖೆ ಮುಖಾಂತರ ಸಲ್ಲಿಸಿದ ಮಹಾಯೋಜನೆ ಪರಿಷ್ಕೃತ–1ರಲ್ಲಿ ಕೆಲವು ಮಾರ್ಪಾಡುಗಳನ್ನು ಮಾಡಿ ಪ್ರಾಧಿಕಾರಕ್ಕೆ ಅನುಕೂಲವಾಗುವ ರೀತಿಯಲ್ಲಿ ಮತ್ತು ಅಗತ್ಯವಿರುವ ಭೂ ಬದಲಾವಣೆ ಉಪಯೋಗಗಳನ್ನು ಮಾಡಿಕೊಂಡು ನಂತರ ಪೂರ್ಣ ಪ್ರಸ್ತಾವನೆಯನ್ನು ಸಲ್ಲಿಸುವಂತೆ ಸೂಚಿಸಿದ ಹಿನ್ನೆಲೆಯಲ್ಲಿ ಈ ಕೆಳಕಂಡ ಅಂಶಗಳನ್ನು ಮಹಾಯೋಜನೆಯ ಪರಿಷ್ಕೃತ–1 ರಲ್ಲಿ ಅಳವಡಿಸಿಕೊಂಡು ಸರ್ಕಾರದ ಅನುಮೋದನೆಗೆ ಸಲ್ಲಿಸಲಾಗಿದೆ.

1) Group Housing Definition ತೆಗೆದು ಹಾಕಲಾಗಿದೆ.
2) ಪ್ರಾರಂಪರಿಕ ಕಟ್ಟಡಗಳ ಸುತ್ತ ಂಡಿಜಚಿ ಠಜಿ ಖಿಡಿಚಿಜ ಛಿಂಟಣಡಿಂಟ ಅಡಿಯಲ್ಲಿ ಕೆಲವು ನಿಬಂಧನೆ ಅಳವಡಿಸಲಾಗಿದ್ದು, ಅದರ ಬದಲಾಗಿ ಘೋಷಿತ ಪಾರಂಪರಿಕ ಕಟ್ಟಡಗಳಿಗೆ AMASR (ತಿದ್ದುಪಡಿ) ಕಾಯ್ದೆಯನ್ವಯ ನಿಬಂಧನೆಗಳನ್ನು ಅಳವಡಿಸಲಾಗಿದೆ.
3) ವಸತಿ ಬಡಾವಣೆಗಳ ಅನುಮೋದನೆ ಕುರಿತ ನಿಯಮಾವಳಿಗಳನ್ನು ಮಾನ್ಯ ನಗರಾಭಿವೃದ್ಧಿ ಸಚಿವರು ಸೂಚಿಸಿರುವಂತೆ ಅಳವಡಿಸಲಾಗಿದೆ.
4) ನೆಲ ಮಹಡಿ (Basement) ಯಲ್ಲಿ ಅನುಮೋದಿಸಬಹುದಾದ ಉಪಯೋಗಗಳನ್ನು ಬದಲಾವಣೆ ಮಾಡಲಾಗಿದೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಈ ಕೆಳಕಂಡಂತೆ ಸರ್ಕಾರದ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ನಅಇ 60 ಗುಅಪ್ರಾ 2010, ಬೆಂಗಳೂರು, ದಿನಾಂಕ : 01–12–2010**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬಳ್ಳಾರಿ ನಗರ ಸ್ಥಳೀಯ ಯೋಜನಾ ಪ್ರದೇಶಕ್ಕೆ ರೂಪಿಸಿರುವ ಮಹಾ ಯೋಜನೆಗೆ (ಪರಿಷ್ಕೃತ–1) ಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಪ್ರಕರಣ 13(3) ರನ್ವಯ ಅಂತಿಮ ಅನುಮೋದನೆಯನ್ನು ನೀಡಲಾಗಿದೆ.

ಮಹಾ ಯೋಜನೆ (ಪರಿಷ್ಕೃತ–1) ಗೆ ಅಂತಿಮ ಅನುಮೋದನೆ ನೀಡಿದ ಗುರುತಾಗಿ ವರದಿ ಹಾಗೂ ನಕ್ಷೆಗಳ ಮೇಲೆ ಸರ್ಕಾರದ ಮುದ್ರೆಯನ್ನು ಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಂ. ಹಿರೇಮಠ,**

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

ಪಿ.ಆರ್. 29

## AGRICULTURE SECRETARIAT

**Sub : Constitution of Expert Committee to study potentials of Agricultural Education and work load of teachers-reg.**

- - - -

**PREAMBLE :-**

Karnataka State has three Agricultural Universities functioning at Bangalore, Dharwad and Raichur, besides establishment of fourth Agriculture University at Shimoga has been notified on 26-11-2010. The State Agriculture Universities have the responsibility of producing required human resource through UG and PG teachings, besides carrying out location specific, problem oriented research to solve the agriculture related issues and deliver the technologies to the farming community through the Development Department of the State Government. Although these Universities are functioning from several decades, assessment of manpower required for various agriculture and related sectors is not available in any studies. Further, demand for establishment of new colleges is being put forth by different sections of the society. On any average, the Universities produce 1200 undergraduates wherein nearly 50% of them join master degree programme of which 50% will normally seek admission to doctoral degree programmes. In the recent years, the graduates from State Agricultural Universities are being employed not only in Universities, Agri. Departments and also in various input agencies, sugar factories, banks etc., The Agriculture Assistants positions have been periodically upgraded and is being treated as dying cadre resulting in big vaccum in effective transfer of technology to the farming community. Further, it is felt that, intermediatory extension personnel skills/trained technicians/entrepreneurs are to be promoted in Agriculture and allied sectors. Therefore, there is a need for human resource assessment in line with the demand of graduates from agriculture and related sectors. Hence, this order.

**GOVERNMENT ORDER No. AHD 320 AUM 2010, BANGALORE, DATED : 29/12/2010**

The Government are pleased to appoint a Committee under the Chairmanship of Dr. S. Bisalaiah, Former Vice Chancellor, UAS, Bangalore alongwith following members, to make suitable recommendations to Government:-

1. Dr. M.N. Sheelavanthar - Former Vice Chancellor, UAS, Bangalore.
2. Dr. M.A. Singlachar - Former Director of Research, UAS, Bangalore.
3. Dr. T.K. Prabhakarashetty - Former Director of Extension, UAS, Bangalore.
4. Dr. H. Chandrashekar - Co-ordinator, PPMC, UAS, Bangalore

**TERMS OF REFERENCE :-**

1. To assess the requirement of establishment of New agricultural Universities/Agricultural Colleges and KVKs in different parts of the State.
2. To study the existing man power requirement to Agricultural Universities, Agri. Department, Input agencies, Sugar industries, Banking sector, State Development departments etc., and suggest the future admission pattern to meet the requirement on demand driven approach for the next ten years period.
3. To suggest, starting of appropriate Diploma/Certificate courses to meet the field functionary/intermediary man power requirement;
4. To assess the work load of teachers in Agricultural/Horticultural/KVAFS Universities as per the UGC and accreditation norms;

2. The committee shall submit its final report by the end of April 2011 for the first three above terms, in order to facilitate to implement the recommendations for the ensuing academic year. For the fourth point, the Committee shall submit its report before the end of December 2011.

By Order and in the name of the Governor of Karnataka
(G.K. GURANI)
Under secretary to Government.
Department of Agriculture (Services).

PR 147

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ** : 2007–08ನೇ ಸಾಲಿನಲ್ಲಿ ಕಬ್ಬು ಬೆಳೆದ ರೈತರಿಗೆ ಹಾಗೂ ಸಕ್ಕರೆ ಕಾರ್ಖಾನೆಗಳಿಗೆ ರಾಜ್ಯ ಸರ್ಕಾರದಿಂದ ವಿಶೇಷ ನೆರವು.

**ಓದಲಾಗಿದೆ** :
1) ಸರ್ಕಾರದ ಆದೇಶ ಸಂಖ್ಯೆ: ಸಿಐ 19 ಎಸ್‌ಜಿಎಫ್ 2008 (ಭಾ–2), ದಿನಾಂಕ: 12–03–2008.
2) ಸರ್ಕಾರದ ಆದೇಶ ಸಂಖ್ಯೆ: ಸಿಐ 19 ಎಸ್‌ಜಿಎಫ್ 2008 (ಭಾ–2), ದಿನಾಂಕ:13–06–2008.
3) ಸರ್ಕಾರದ ಆದೇಶ ಸಂಖ್ಯೆ: ಸಿಐ 19 ಎಸ್‌ಜಿಎಫ್ 2008 (ಭಾ–2(2)), ದಿನಾಂಕ: 28–08–2008.
4) ಸರ್ಕಾರದ ಆದೇಶ ಸಂಖ್ಯೆ: ಸಿಐ 19 ಎಸ್‌ಜಿಎಫ್ 2008 (ಭಾ–2(3)), ದಿನಾಂಕ: 16–12–2008.
5) ಸರ್ಕಾರದ ಆದೇಶ ಸಂಖ್ಯೆ: ಸಿಐ 19 ಎಸ್‌ಜಿಎಫ್ 2008 (4) ದಿನಾಂಕ: 02–01–2009.
6) ಸರ್ಕಾರದ ಆದೇಶ ಸಂಖ್ಯೆ: ಸಿಐ 19 ಎಸ್‌ಜಿಎಫ್ 2008 (5) ದಿನಾಂಕ: 19–01–2009.
7) ಸರ್ಕಾರದ ಆದೇಶ ಸಂಖ್ಯೆ: ಸಿಐ 19 ಎಸ್‌ಜಿಎಫ್ 2008 (6) ದಿನಾಂಕ: 07–07–2009.
8) ಸರ್ಕಾರದ ಆದೇಶ ಸಂಖ್ಯೆ: ಸಿಐ 19 ಎಸ್‌ಜಿಎಫ್ 2008 (7) ದಿನಾಂಕ: 07–12–2009.

9) ಆಯುಕ್ತರು ಕಬ್ಬು ಅಭಿವೃದ್ಧಿರವರ ಪತ್ರಗಳು ದಿನಾಂಕ 08–05–2009., 09–06–2009, 30–06–2009, 30–06–2009, 20–07–2009 ಮತ್ತು 22–07–2009.

***

**ಪ್ರಸ್ತಾವನೆ :**

ಮೇಲೆ ಓದಲಾದ (1) ರಲ್ಲಿರುವ ಸರ್ಕಾರದ ಆದೇಶದಲ್ಲಿ ರಾಜ್ಯದ ಸಕ್ಕರೆ ಕಾರ್ಖಾನೆಗಳು 2007–08ನೇ ಸಾಲಿನ ಹಂಗಾಮಿನಲ್ಲಿ ದಿನಾಂಕ: 31–03–2008ರ ಅಂತ್ಯಕ್ಕೆ 12 ತಿಂಗಳು ಮೀರಿ ಪಕ್ವವಾದ ಎಲ್ಲಾ ಕಬ್ಬನ್ನು ನುರಿಸಬೇಕೆಂಬ ಹಿನ್ನೆಲೆಯಲ್ಲಿ ಸಕ್ಕರೆ ಕಾರ್ಖಾನೆಗಳನ್ನು ಪ್ರೋತ್ಸಾಹಿಸುವ ದೃಷ್ಟಿಯಿಂದ ಕೆಲವು ವಿನಾಯಿತಿ ಮತ್ತು ಸಹಾಯಧನ ಸೌಲಭ್ಯಗಳನ್ನು ನೀಡಲಾಗುವುದೆಂದು ಆದೇಶಿಸಲಾಗಿದೆ.

ಮೇಲೆ ಓದಲಾದ (2)ರಲ್ಲಿರುವ ಆದೇಶದಲ್ಲಿ 2.00 ಕೋಟಿ ರೂ. ಗಳನ್ನು ಶ್ರೀ ಮಲಪ್ರಭಾ ಸಹಕಾರಿ ಸಕ್ಕರೆ ಕಾರ್ಖಾನೆಗೆ ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (3)ರಲ್ಲಿರುವ ಆದೇಶದಲ್ಲಿ 100.59 ಲಕ್ಷ ರೂ. ಗಳನ್ನು ಮೈಸೂರು ಪೇಪರ್ ಮಿಲ್ಸ್ ಲಿ., ರವರಿಗೆ ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (4) ರಲ್ಲಿರುವ ಆದೇಶದಲ್ಲಿ 6,64,76,652/– ರೂ. ಗಳನ್ನು ನಂದಿ ಸ.ಸ. ಕಾರ್ಖಾನೆ ಮತ್ತು ದೂದ್‌ಗಂಗಾ ಸ.ಸ. ಕಾ. ಈ ಎರಡು ಸಕ್ಕರೆ ಕಾರ್ಖಾನೆಗಳಿಗೆ ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (5)ರಲ್ಲಿರುವ ಆದೇಶದಲ್ಲಿ ವಿಸ್ತರಿಸಿದ ಅವಧಿಯಲ್ಲಿ ನುರಿಸಿದ ಕಬ್ಬಿಗೆ ರೂ. 100/– ಗಳ ಸಹಾಯಧನ ಬಾಬ್ತು ಶೇ. 50 ರಷ್ಟು 11,15,00,000/– ರೂ. ಗಳನ್ನು ಸಾಗಾಣಿಕೆ ಸಹಾಯಧನ 7,25,00,000/– ರೂ. ಗಳನ್ನು ಒಟ್ಟು ಸೇರಿ 18,40,00,000/– ರೂ. ಗಳನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (6)ರಲ್ಲಿರುವ ಆದೇಶದಲ್ಲಿ 100/– ರೂ. ಗಳ ಸಹಾಯಧನ ಬಾಬ್ತು 4,90,05,135/– ರೂ. ಗಳನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (7)ರಲ್ಲಿರುವ ಆದೇಶದಲ್ಲಿ 3,69,77,708/– ರೂ. ಗಳನ್ನು ಸಾಗಾಣಿಕೆ ಸಹಾಯಧನವನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (8)ರಲ್ಲಿರುವ ಆದೇಶದಲ್ಲಿ 3,87,56,200/– ರೂ. ಗಳ ರಫ್ತು ಸಹಾಯಧನವನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (9)ರಲ್ಲಿರುವ ಆಯುಕ್ತರು ಕಬ್ಬು ಅಭಿವೃದ್ಧಿರವರ ಪತ್ರಗಳಲ್ಲಿ ರಾಜ್ಯದ 6 ಸಕ್ಕರೆ ಕಾರ್ಖಾನೆಗಳು 2007–08ನೇ ಸಾಲಿನಲ್ಲಿ ವಿಸ್ತರಿಸಿದ ಅವಧಿಯಲ್ಲಿ ಕಬ್ಬು ನುರಿಸಿದ್ದು, ಮತ್ತು 30 ಕಿ.ಮೀ. ಗೆ ಮೀರಿದ ದೂರದಿಂದ ಕಬ್ಬು ಸಾಗಾಣಿಕೆ ಮಾಡಿಕೊಂಡಿದ್ದು ಹಾಗೂ ಸಕ್ಕರೆಯನ್ನು ರಫ್ತು ಮಾಡಲಾಗಿದ್ದು ಈ ಸಂಬಂಧ ದಿನಾಂಕ 12–03–2008ರ ಸರ್ಕಾರದ ಆದೇಶದಂತೆ ವಿಸ್ತರಿಸಿದ ಅವಧಿಯಲ್ಲಿ ನುರಿಸಿದ್ದ ಕಬ್ಬಿಗೆ ಸಹಾಯಧನ, ಸಾಗಾಣಿಕೆ ಸಹಾಯಧನ ಮತ್ತು ರಫ್ತು ಸಹಾಯಧನವನ್ನು ಕಾರ್ಖಾನೆಗಳಿಗೆ ಬಿಡುಗಡೆ ಮಾಡಲು ಸಂಬಂಧಿಸಿದ ಜಿಲ್ಲಾಧಿಕಾರಿಗಳಿಗೆ ಹಣ ಬಿಡುಗಡೆಗೆ ಶಿಫಾರಸ್ಸು ಮಾಡಿದ್ದಾರೆ.

ಆಯುಕ್ತರು ಕಬ್ಬು ಅಭಿವೃದ್ಧಿರವರ ಪ್ರಸ್ತಾವನೆಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಐ 19 ಎಸ್‌ಜಿಎಫ್ 2008 (8), ಬೆಂಗಳೂರು, ದಿನಾಂಕ: 21–12–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, 2007–08ನೇ ಸಾಲಿನಲ್ಲಿ ಈ ಕೆಳಕಂಡ 6 ಸಕ್ಕರೆ ಕಾರ್ಖಾನೆಗಳು 30 ಕಿ.ಮೀ. ಹೊರಗಿನ ದೂರದಿಂದ ಸಾಗಾಣಿಕೆ ಮಾಡಿಕೊಂಡ ಕಬ್ಬಿಗೆ ಪ್ರತಿ ಟನ್‌ಗೆ ಪ್ರತಿ ಕಿ.ಮೀ.ಗೆ ರೂ. 2/– ರಂತೆ ಸಾಗಾಣಿಕೆ ಸಹಾಯಧನ ರೂ. 1,36,52,873/– ಗಳನ್ನು (ಒಂದು ಕೋಟಿ ಮೂವತ್ತಾರು ಲಕ್ಷ, ಐವತ್ತೆರಡು ಸಾವಿರದ ಎಂಟುನೂರ ಎಪ್ಪತ್ ಮೂರು ರೂ. ಗಳು ಮಾತ್ರ) ಸಾಗಾಣಿಕೆ ಸಹಾಯಧನವಾಗಿ ಈ ಕೆಳಕಂಡ ಸಕ್ಕರೆ ಕಾರ್ಖಾನೆಗಳಿಗೆ ನೀಡುವ ಸಲುವಾಗಿ ಸಂಬಂಧಪಟ್ಟ ಜಿಲ್ಲಾಧಿಕಾರಿಗಳಿಗೆ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

| ಕ್ರ. ಸಂ. | ಕಾರ್ಖಾನೆ ಹೆಸರು | ಸಾಗಾಣಿಕೆ ಸಹಾಯಧನ (ರೂ.ಗಳಲ್ಲಿ) | ಜಿಲ್ಲಾಧಿಕಾರಿ/ಜಿಲ್ಲೆ | ಯಾರಿಗೆ ಪಾವತಿ |
|---|---|---|---|---|
| 1 | ಕೊಥಾರಿ ಶುಗರ್ಸ್ (ಲಿ) (ಪಾಂಡವಪುರ ಎಸ್.ಎಸ್.ಕೆ ಗುತ್ತಿಗೆ ಪಡೆದಿದ್ದಾರೆ) | 42,299–00 | ಜಿಲ್ಲಾಧಿಕಾರಿ, ಮಂಡ್ಯ ಜಿಲ್ಲೆ | ಕಾರ್ಖಾನೆಗೆ |
| 2 | ಸದಾಶಿವ ಶುಗರ್ಸ್ (ಲಿ) | 11,21,004–00 | ಜಿಲ್ಲಾಧಿಕಾರಿ, ಬಾಗಲಕೋಟೆ ಜಿಲ್ಲೆ | ಕಾರ್ಖಾನೆಗೆ |
| 3 | ನಾರಂಜಾ ಸ.ಸ.ಕಾ | 40,19,578–00 | ಜಿಲ್ಲಾಧಿಕಾರಿ, ಬೀದರ್ ಜಿಲ್ಲೆ | ಕಾರ್ಖಾನೆಗೆ |
| 4 | ಶಿರಗುಪ್ಪ ಶುಗರ್ಸ್ ಅಂಡ್ ಕೆಮಿಕಲ್ಸ್ ಲಿಮಿಟೆಡ್ | 70,56,715–00 | ಜಿಲ್ಲಾಧಿಕಾರಿ, ಬಳ್ಳಾರಿ ಜಿಲ್ಲೆ | ಕಾರ್ಖಾನೆಗೆ |
| 5 | ಶ್ರೀ ಭಾಗ್ಯಲಕ್ಷ್ಮಿ ಸ.ಸ.ಕಾ | 4,03,976–00 | ಜಿಲ್ಲಾಧಿಕಾರಿ, ಬೆಳಗಾಂ ಜಿಲ್ಲೆ | ಕಾರ್ಖಾನೆಗೆ |
| 6 | ಸತೀಶ್ ಶುಗರ್ಸ್ ಲಿ., | 10,09,371–00 | ಜಿಲ್ಲಾಧಿಕಾರಿ, ಬೆಳಗಾಂ ಜಿಲ್ಲೆ | ಕಾರ್ಖಾನೆಗೆ |
| | ಒಟ್ಟು | **1,36,52,873–00** | | |

2010–11ನೇ ಸಾಲಿನ ಆಯವ್ಯಯದಲ್ಲಿ ಈ ಉದ್ದೇಶಕ್ಕಾಗಿ ಲೆಕ್ಕ ಶೀರ್ಷಿಕೆ **"2852–08–201–0–07 (ಯೋಜನೆ)"** ಸಹಾಯಧನ ಇದರಡಿಯಲ್ಲಿ 2409–00 ಲಕ್ಷ ರೂ. ಗಳನ್ನು ಒದಗಿಸಲಾಗಿದ್ದು, ಈ ಹಣದಲ್ಲಿ ಮೇಲಿನಂತೆ 1,36,52,873/– ರೂ. ಗಳನ್ನು ಕಾರ್ಖಾನೆಗಳಿಗೆ ಸಾಗಾಣಿಕೆ ಸಹಾಯಧನವಾಗಿ ಬಿಡುಗಡೆಗೆ ಮಂಜೂರು ಮಾಡಲಾಗಿದೆ.

ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಬಿಡುಗಡೆ ಮಾಡಲಾದ ಈ ಹಣವನ್ನು ಸರ್ಕಾರದ ಆದೇಶ ದಿನಾಂಕ 12–03–2008ರಲ್ಲಿ ವಿಧಿಸಲಾಗಿರುವ ನಿಬಂಧನೆ ಮತ್ತು ಮಾರ್ಗಸೂಚಿಗಳನ್ವಯ ಪರಿಶೀಲಿಸಿ ಸಂಬಂಧಪಟ್ಟ ಜಿಲ್ಲೆಗಳ ಜಿಲ್ಲಾಧಿಕಾರಿಗಳ ಮೂಲಕ ಸಂಬಂಧಿಸಿದ ಕಾರ್ಖಾನೆಗಳಿಗೆ ಬಿಡುಗಡೆ ಮಾಡಲು ಕ್ರಮ ವಹಿಸತಕ್ಕದ್ದು, ಕಾರ್ಖಾನೆಗಳು ರೈತರಿಗೆ ಕಬ್ಬು ಖರೀದಿ ಬಾಕಿ ಉಳಿಸಿಕೊಂಡಿದ್ದಲ್ಲಿ, ರೈತರಿಗೆ ಆದ್ಯತೆ ಮೇರೆಗೆ ಬಿಡುಗಡೆ ಮಾಡಲು ಕ್ರಮವಹಿಸತಕ್ಕದ್ದು, ವಿತರಿಸಲಾದ ಹಣದ ವಿವರವನ್ನು ಆಯುಕ್ತರು ಕಬ್ಬು ಅಭಿವೃದ್ಧಿರವರು ಜಿಲ್ಲಾಧಿಕಾರಿಗಳಿಂದ ಪಡೆದು ಸರ್ಕಾರಕ್ಕೆ ವರದಿ ಮಾಡುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್ ಡಿ 1363 ವೆಚ್ಚ–1/2010, ದಿನಾಂಕ: 06–12–2010 ರಲ್ಲಿ ನೀಡಲಾದ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಪಿ. ಆನಂದ್‌ಕುಮಾರ್**
ಪೀಠಾಧಿಕಾರಿ (ಸಕ್ಕರೆ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

ಪಿ.ಆರ್. ನಂ. 148

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ** : ಸಕ್ಕರೆ ಕಾರ್ಖಾನೆಗಳ ವ್ಯಾಪ್ತಿಯಲ್ಲಿರುವ ರಸ್ತೆಗಳ ಕಾಮಗಾರಿ ಅನುಷ್ಠಾನಕ್ಕಾಗಿ 2010–11ನೇ ಸಾಲಿನಲ್ಲಿ ಅನುದಾನ ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ** :
1) ಸರ್ಕಾರದ ಆದೇಶ ಸಂಖ್ಯೆ: ಸಿಐ 87 ಎಸ್‌ಜಿಎಫ್ 2010, ದಿನಾಂಕ 16.06.2010.
2) ಸರ್ಕಾರದ ಆದೇಶ ಸಂಖ್ಯೆ: ಸಿಐ 87 ಎಸ್‌ಜಿಎಫ್ 2010, ದಿನಾಂಕ 26.08.2010.
3) ಆಯುಕ್ತರು ಕಬ್ಬು ಅಭಿವೃದ್ಧಿ ಮತ್ತು ಸಕ್ಕರೆ ನಿರ್ದೇಶಕರವರ ಪತ್ರ ಸಂಖ್ಯೆ ಡಿಎಸ್‌ಕೆ/ರಕರ/ಅನುದಾನ/ 3/2010–11 ದಿನಾಂಕ 17.09.2010.
4) ಸರ್ಕಾರದ ಆದೇಶ ಸಂಖ್ಯೆ: ವಾಕೈ 52 ಆಂಆಸ (1) 2010, ದಿನಾಂಕ 01.04.2010.

**ಪ್ರಸ್ತಾವನೆ :**

ರಾಜ್ಯದ ಸಕ್ಕರೆ ಕಾರ್ಖಾನೆಗಳ ವ್ಯಾಪ್ತಿಯಲ್ಲಿ ಬರುವ ರಸ್ತೆ ಅಭಿವೃದ್ಧಿ ಕಾಮಗಾರಿಗಳ ಅನುಷ್ಠಾನಕ್ಕಾಗಿ 2010–11ನೇ ಸಾಲಿನಲ್ಲಿ ಒದಗಿಸಲಾಗಿದ್ದ ರೂ. 250.00 ಲಕ್ಷಗಳ ಅನುದಾನದಲ್ಲಿ ಮೊದಲನೇ ಮತ್ತು ಎರಡನೇ ತ್ರೈಮಾಸಿಕಕ್ಕೆ ಒಟ್ಟು ರೂ. 125.00 ಲಕ್ಷಗಳನ್ನು ಮೇಲೆ ಓದಲಾದ (1) ಮತ್ತು (2) ರಲ್ಲಿರುವ ದಿನಾಂಕ 16.06.2010ರ ಮತ್ತು 26.08.2010ರ ಸರ್ಕಾರದ ಆದೇಶಗಳಲ್ಲಿ ಆಯುಕ್ತರು ಕಬ್ಬು ಅಭಿವೃದ್ಧಿರವರಿಗೆ ಬಿಡುಗಡೆ ಮಾಡಲಾಗಿದೆ.

ರಾಜ್ಯದ ಈ ಕೆಳಕಂಡ 8 ಸಕ್ಕರೆ ಕಾರ್ಖಾನೆಗಳ ವ್ಯಾಪ್ತಿಯಲ್ಲಿರುವ ರಸ್ತೆ ಅಭಿವೃದ್ಧಿ ಕಾಮಗಾರಿಗಳ ಅನುಷ್ಠಾನಕ್ಕಾಗಿ 2010–11ನೇ ಸಾಲಿನಲ್ಲಿ ಒದಗಿಸಲಾಗಿರುವ ರೂ. 250/– ಲಕ್ಷಗಳಲ್ಲಿ ಬಾಕಿ ಉಳಿದಿರುವ ರೂ. 125.00 ಲಕ್ಷಗಳಲ್ಲಿ ರೂ. 120.00 ಲಕ್ಷಗಳನ್ನು ಬಿಡುಗಡೆ ಮಾಡುವಂತೆ ಮತ್ತು ರೂ. 5.00 ಲಕ್ಷಗಳನ್ನು ರಸ್ತೆ ಅಭಿವೃದ್ಧಿ ಕಾಮಗಾರಿಗಳ ಮೌಲ್ಯಮಾಪನ ಕಾರ್ಯಕ್ಕೆ ಬಿಡುಗಡೆ ಮಾಡಲು ಮೇಲೆ ಓದಲಾದ (3)ರಲ್ಲಿನ ದಿನಾಂಕ 17.09.2010ರ ಪತ್ರದಲ್ಲಿ ಆಯುಕ್ತರು ಕಬ್ಬು ಅಭಿವೃದ್ಧಿರವರು ಪ್ರಸ್ತಾಪಿಸಿರುತ್ತಾರೆ.

ರೂ. ಲಕ್ಷಗಳಲ್ಲಿ

| ಕ್ರ. ಸಂ. | ಕಾರ್ಖಾನೆಯ ಹೆಸರು | ವರ್ಷ | ಮೊತ್ತ |
|---|---|---|---|
| 1 | ಗೋದಾವರಿ ಬಯೋರಿಫೈನರೀಸ್ ಲಿಮಿಟೆಡ್, ಸಮೀರವಾಡಿ, ಬಾಗಲಕೋಟೆ ಜಿಲ್ಲೆ | 2001–02 | 7.60 |
| 2 | ಜಮಖಂಡಿ ಶುಗರ್ಸ್ ಲಿಮಿಟೆಡ್, ಹೀರೆಪಡಸಾಲಗಿ, ಜಮಖಂಡಿ ತಾ. ಬಾಗಲಕೋಟೆ ಜಿಲ್ಲೆ | 2001–02 | 12.25 |
| 3 | ಹಿರಣ್ಯಕೇಶಿ ಸಹಕಾರಿ ಸಕ್ಕರೆ ಕಾರ್ಖಾನೆ, ಸಂಕೇಶ್ವರ, ಹುಕ್ಕೇರಿ ತಾ. ಬೆಳಗಾಂ ಜಿಲ್ಲೆ | 2001–02 | 24.48 |
| 4 | ಭದ್ರಾ ಸಹಕಾರಿ ಸಕ್ಕರೆ ಕಾರ್ಖಾನೆ, ದೊಡ್ಡಬಾತಿ, ದಾವಣಗೆರೆ ಜಿಲ್ಲೆ | 2002–03<br>2003–04 | 10.40<br>0.75 |
| 5 | ದಾವಣಗೆರೆ ಶುಗರ್ಸ್ ಲಿಮಿಟೆಡ್, ಕುಕ್ಕವಾಡ, ದಾವಣಗೆರೆ ಜಿಲ್ಲೆ | 2002–03 | 8.00 |
| 6 | ಶ್ರೀರಾಮ ಸ.ಸ.ಕಾ. ಚುಂಚನಕಟ್ಟೆ, ಕೆ.ಆರ್. ನಗರ ತಾ. ಮೈಸೂರು ಜಿಲ್ಲೆ | 2002–03<br>2004–05 | 3.35<br>0.69 |
| 7 | ಬನ್ನಾರಿ ಅಮ್ಮನ್ ಶುಗರ್ಸ್ ಅಲಗಂಚಿ, ನಂಜನಗೂಡು, ಮೈಸೂರು ಜಿಲ್ಲೆ | 2005–06 | 43.28 |

| | | | |
|---|---|---|---|
| 8 | ಕೋರಮಂಡಲ್ ಶುಗರ್ಸ್, ಕೆ.ಆರ್, ಪೇಟೆ, ಮಂಡ್ಯ ಜಿಲ್ಲೆ (ಐ.ಸಿ.ಎಲ್. ಶುಗರ್ಸ್) | 2005–06 | 9.00 |
| 9 | ಮೌಲ್ಯಮಾಪನ ಕಾರ್ಯಕ್ಕೆ | | 5.00 |
| | ಒಟ್ಟು | | 125.00 |

ಆಯುಕ್ತರು ಕಬ್ಬು ಅಭಿವೃದ್ಧಿರವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಐ 87 ಎಸ್‌ಜಿಎಫ್ 2010 ಬೆಂಗಳೂರು, ದಿನಾಂಕ: 21–12–2010**

ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಪ್ರಸ್ತಾವನೆಯಲ್ಲಿ ಕೋರಿರುವಂತೆ ರಾಜ್ಯದ ಸಕ್ಕರೆ ಕಾರ್ಖಾನೆಗಳ ವ್ಯಾಪ್ತಿಯಲ್ಲಿ ಬರುವ ರಸ್ತೆಗಳನ್ನು ಅಭಿವೃದ್ಧಿ ಪಡಿಸುವ ಕ್ರಿಯಾ ಯೋಜನೆಯನ್ನು ಕಾರ್ಯಗತಗೊಳಿಸಲು 2010–11ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 4860–04–800–0–01–ರಸ್ತೆಗಳು 172 (ಯೋಜನೆ) ಅಡಿಯಲ್ಲಿ ಒದಗಿಸಲಾಗಿರುವ ರೂ. 250.00 ಲಕ್ಷಗಳ ಅನುದಾನದಲ್ಲಿ ಬಾಕಿ ಉಳಿದಿರುವ ರೂ. 125.00 ಲಕ್ಷಗಳಲ್ಲಿ ರೂ. 120 ಲಕ್ಷಗಳನ್ನು (ಒಂದುನೂರು ಇಪ್ಪತ್ತು ಲಕ್ಷಗಳು ಮಾತ್ರ) ಪ್ರಸ್ತಾವನೆಯಲ್ಲಿ ನಮೂದಿಸಿರುವ 8 ಕಾರ್ಖಾನೆಗಳ ವ್ಯಾಪ್ತಿಯ ರಸ್ತೆ ಅಭಿವೃದ್ಧಿ ಕಾಮಗಾರಿಗಳಿಗೆ ಬಿಡುಗಡೆ ಮಾಡುವ ಸಲುವಾಗಿ ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ರವರಿಗೆ ಬಿಡುಗಡೆ ಮಾಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 1125/ವೆಚ್ಚ–1/2010, ದಿನಾಂಕ 23.07.2010ರಲ್ಲಿ ,ಮತ್ತು ಟಿಪ್ಪಣಿ ಸಂಖ್ಯೆ: ಎಫ್‌ಡಿ 1720/ವೆಚ್ಚ–1/2010 ದಿನಾಂಕ 06.12.2010 ರಲ್ಲಿ ನೀಡಲಾದ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಪಿ.ಆನಂದ್‌ಕುಮಾರ್)**

ಪೀಠಾಧಿಕಾರಿ (ಸಕ್ಕರೆ)

ಪಿ.ಆರ್. ನಂ. 149 ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ** : ಪೊನ್ನಂಪೇಟೆ ಸಿವ್ಹಿಲ್ ಜಡ್ಜ್ ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯಕ್ಕೆ ಸಿಬ್ಬಂದಿಯನ್ನು ಸೃಜಿಸುವ ಬಗ್ಗೆ

**ಓದಲಾಗಿದೆ** : 1) ಸರ್ಕಾರದ ಆದೇಶ ಸಂಖ್ಯೆ: ಲಾ 12 ಎಲ್‌ಸಿಇ 2010, ದಿನಾಂಕ 11.01.2010.

2) ರಿಜಿಸ್ಟ್ರಾರ್ ಜನರಲ್‌ರವರ ಪತ್ರದ ಸಂಖ್ಯೆ: ಜಿಒಬಿ 11/253/2005, ದಿನಾಂಕ: 17–02–2010.

***

**ಪ್ರಸ್ತಾವನೆ :**

ಮೇಲೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಕೊಡುಗು ಜಿಲ್ಲೆಯ ವಿರಾಜಪೇಟೆಯಲ್ಲಿರುವ ಹೆಚ್ಚುವರಿ ಸಿವ್ಹಿಲ್ ಜಡ್ಜ್ (ಕಿರಿಯ ವಿಭಾಗ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯದ ಅಧ್ಯಕ್ಷಾಧಿಕಾರಿ ಹಾಗೂ ಸಿಬ್ಬಂದಿಯಯ ಸೇರಿದಂತೆ ಪೊನ್ನಂಪೇಟೆಗೆ ಸ್ಥಳಾಂತರಿಸಲು ಆದೇಶ ಹೊರಡಿಸಲಾಗಿದೆ. ಮೇಲೆ (2)ರ ಪತ್ರದಲ್ಲಿ ಸದರಿ ನ್ಯಾಯಾಲಯಕ್ಕೆ ಸಿಬ್ಬಂದಿ ಕೊರತೆ ಇರುವುದರಿಂದ ಸಿವ್ಹಿಲ್ ಜಡ್ಜ್ ಮತ್ತು ಜೆ.ಎಂ.ಎಫ್.ಸಿ. ವಿರಾಜಪೇಟೆಯ 8 ಹುದ್ದೆಗಳನ್ನು ಸ್ಥಳಾಂತರಿಸಲು ಹಾಗೂ ಈ ಕೆಳಕಂಡ 29 ಹುದ್ದೆಗಳನ್ನು ಸೃಜಿಸುವ ಬಗ್ಗೆ ರಿಜಿಸ್ಟ್ರಾರ್ ಜನರಲ್‌ರವರು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

| ಕ್ರ. ಸಂ. | ಹುದ್ದೆಯ ಹೆಸರು | ಸ್ಥಳಾಂತರಿಸುವ ಹುದ್ದೆಗಳ ಸಂಖ್ಯೆ | ಸೃಜಿಸುವ ಹುದ್ದೆಗಳ ಸಂಖ್ಯೆ |
|---|---|---|---|
| 1. | ಸಿವಿಲ್ ನ್ಯಾಯಾಧೀಶರು (ಕಿ.ವಿ.) ಮತ್ತು ಜೆ.ಎಂ.ಎಫ್.ಸಿ | 01 | – |
| 2. | ಶಿರಸ್ತೆದಾರರು | – | 02 |
| 3. | ಶೀಘ್ರಲಿಪಿಗಾರರು | 01 | – |
| 4. | ಪ್ರಥಮ ದರ್ಜೆ ಸಹಾಯಕರು | – | 06 |
| 5. | ದ್ವಿತೀಯ ದರ್ಜೆ ಸಹಾಯಕರು | 01 | 08 |
| 6. | ಬೆರಳಚ್ಚುಗಾರರು | 01 | 02 |
| 7. | ಬೆರಳಚ್ಚುಗಾರರು – ನಕಲುಗಾರರು | 01 | 01 |
| 8. | ಬೇಲಿಫ್ | – | 02 |
| 9. | ಪ್ರೋಸಸ್ ಸರ್ವರ್ | – | 05 |
| 10. | ಅಟೆಂಡರ್ | 01 | 01 |
| 11. | ಪ್ಯೂನ್ | 02 | 02 |
| | **ಒಟ್ಟು** | **08** | **29** |

ರಿಜಿಸ್ಟ್ರಾರ್ ಜನರಲ್‌ರವರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 12 ಎಲ್‌ಸಿಇ 2010 ಬೆಂಗಳೂರು, ದಿನಾಂಕ: 27–12–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸಿವಿಲ್ ಜಡ್ಜ್ ಮತ್ತು ಜೆ.ಎಂ.ಎಫ್.ಸಿ. ಪೊನ್ನಂಪೇಟೆಯ ನ್ಯಾಯಾಲಯಕ್ಕೆ ಈ ಕೆಳಕಂಡ ಸಿಬ್ಬಂದಿಯನ್ನು ಸೃಜಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

| ಕ್ರ. ಸಂ. | ಹುದ್ದೆಯ ಹೆಸರು | ಹುದ್ದೆಗಳ ಸಂಖ್ಯೆ |
|---|---|---|
| 1. | ಶಿರಸ್ತೆದಾರರು | 01 |
| 2. | ಪ್ರಥಮ ದರ್ಜೆ ಸಹಾಯಕರು | 02 |
| 3. | ದ್ವಿತೀಯ ದರ್ಜೆ ಸಹಾಯಕರು | 03 |
| 4. | ಬೇಲಿಫ್ಸ್ | 02 |
| 5. | ಪ್ರೋಸಸ್ ಸರ್ವರ್ಸ್ | 03 |
| | **ಒಟ್ಟು** | **11** |

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 336 ವೆಚ್ಚ-10/2010, ದಿನಾಂಕ: 04-10-2010 ರನ್ವಯ ಸಹಮತ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಸಯ್ಯದ್ ಅಬ್ದುಲ್ ನಜೀರ್)**
ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ-1)
ಕಾನೂನು ನ್ಯಾಯಾ ಮತ್ತು ಮಾನವ ಹಕ್ಕುಗಳ ಇಲಾಖೆ

ಪಿ.ಆರ್. ನಂ. 150

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ :** ಅಂಗವಿಕಲ ಮಕ್ಕಳ ಕೇಂದ್ರೀಕೃತ ವಿಶೇಷ ಶೈಕ್ಷಣಿಕ ಹೊಸ ಯೋಜನೆಯನ್ನು ಅನುಷ್ಠಾನಗೊಳಿಸುವ ಬಗ್ಗೆ ಆದೇಶ.

**ಓದಲಾಗಿದೆ :** ಪತ್ರ ಸಂಖ್ಯೆ : ನಿಅಕಇ/ಯೋಜನಾ ಶಾಖೆ/ಸಿ-9/02/10-11/91, ದಿನಾಂಕ 9-4-2010.

**ಪ್ರಸ್ತಾವನೆ :**

2010-11ನೇ ಸಾಲಿನಲ್ಲಿ ಮಾನ್ಯ ಮುಖ್ಯ ಮಂತ್ರಿಗಳ ಆಯವ್ಯಯ ಭಾಷಣದಲ್ಲಿ ಬುದ್ದಿಮಾಂದ್ಯ ಮತ್ತು ಆಟಿಸಂ ನ್ಯೂನತೆಯಿಂದ ಹಾಗೂ ಅಂಧ ಮುಂತಾದ ವಿಕಲತೆಯುಳ್ಳ ಮಕ್ಕಳ ಪಾಲನೆಗಾಗಿ ನಡೆಸುತ್ತಿರುವ ಸಂಸ್ಥೆಗಳಿಗೆ ಪಾಲನಾ ವೆಚ್ಚ ಹಾಗೂ ಶಿಕ್ಷಕರ ಸಂಭಾವನೆಗಳನ್ನು ಒಳಗೊಂಡಂತೆ ಮಕ್ಕಳ ಸಂಖ್ಯೆ ಆಧಾರದ ಮೇಲೆ ಅನುದಾನವನ್ನು ನೀಡಲು ರೂ.20.00 ಕೋಟಿ ಆಯವ್ಯಯ ಒದಗಿಸಲಾಗಿದೆಯೆಂದು ಘೋಷಿಸಲಾಗಿದ್ದು, ಈ ಸಂಬಂಧ 2010-11 ನೇ ಆಯವ್ಯಯದಲ್ಲಿ ರೂ. 10.00 ಕೋಟಿಗಳ ಅನುದಾನವನ್ನು ಒದಗಿಸಲಾಗಿದೆ.

ನಿರ್ದೇಶಕರು, ಅಂಗವಿಕಲರ ಮತ್ತು ಹಿರಿಯ ನಾಗರಿಕರ ಕಲ್ಯಾಣ ಇಲಾಖೆ ರವರು ಮೇಲೆ ಓದಲಾದ ಪತ್ರದೊಂದಿಗೆ ಕಳುಹಿಸಿರುವ ಪ್ರಸ್ತಾವನೆಯಲ್ಲಿ ವಿಶೇಷ ಶಾಲೆಗಳಿಗೆ ಆರ್ಥಿಕ ನೆರವು ಒದಗಿಸುವ ಯೋಜನೆಗೆ 2010-11ನೇ ಸಾಲಿಗೆ ರೂ.10.00 ಕೋಟಿ ಆಯವ್ಯಯ ನಿಗದಿಯಾಗಿದ್ದು, ಸರ್ಕಾರೇತರ ಸಂಸ್ಥೆಗಳಿಂದ ನಡೆಸುತ್ತಿರುವ ಅಂಗವಿಕಲರ ವಿಶೇಷ ಶಾಲೆಗಳ ವಿಶೇಷ ಮಕ್ಕಳ ಶಿಶು ಕೇಂದ್ರೀಕೃತ ಯೋಜನೆ/ವಿಶೇಷ ಶಾಲೆಗಳಲ್ಲಿ ವ್ಯಾಸಂಗ ಮಾಡುತ್ತಿರುವ ಮಕ್ಕಳಿಗೆ ಆರ್ಥಿಕ ಸಹಾಯಧನ ಯೋಜನೆಯನ್ನು ಅನುಮೋದಿಸಲು ಕೋರಿರುತ್ತಾರೆ.

ಈ ಯೋಜನೆ ಅನುಷ್ಠಾನದ ಪೂರ್ವ ಸರ್ಕಾರಿ ಆದೇಶ ಸಂಖ್ಯೆ : ಪಿಡಿ 5 ಐಎಂಎಂ 2010 ದಿನಾಂಕ 3.04.2010 ರ ಕಂಡಿಕೆ 3ರ ಮೇರೆಗೆ ಯೋಜನಾ ಇಲಾಖೆ ಮತ್ತು ಆರ್ಥಿಕ ಇಲಾಖೆ (ವೆಚ್ಚ-3) ಶಾಖೆಯ ಅಭಿಪ್ರಾಯ/ಸಹಮತಿಯನ್ನು ಕ್ರಮವಾಗಿ ಟಿಪ್ಪಣಿ ಸಂಖ್ಯೆ : ಪಿಡಿ 11 ಐಎಂಎಂ 10, ದಿನಾಂಕ 26-04-2010 ಮತ್ತು ಎಫ್‌ಡಿ 272 ವೆಚ್ಚ-3/10, ದಿನಾಂಕ 29-10-2010 ರಂತೆ ಪಡೆಯಲಾಗಿದೆ.

ಮೇಲಿನ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದ್ದು, ದಿನಾಂಕ 20-04-2010 ರಂದು ಮಾನ್ಯ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ನಡೆದ ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮ ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ರಾಜ್ಯ ಮಟ್ಟದ ಪರಿಶೀಲನಾ ಸಮಿತಿ ಸಭೆಯಲ್ಲಿ ಈ ವಿಷಯವನ್ನು ಪ್ರಸ್ತಾಪಿಸಿದ್ದು, 2010-11 ನೇ ಸಾಲಿನ ಆರ್ಥಿಕ ವರ್ಷವು ಅಂತ್ಯಗೊಳ್ಳುತ್ತಿರುವುದರಿಂದ ಸಚಿವ ಸಂಪುಟದ ಅನುಮೋದನೆ ಪಡೆಯುವ ಷರತ್ತಿಗೊಳಪಟ್ಟು ಆದೇಶ ಹೊರಡಿಸುವಂತೆ ನೀಡಿದ ಸೂಚನೆ ಮೇರೆಗೆ ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಮಮಇ 109 ಪಿಹೆಚ್‌ಪಿ 2010, ಬೆಂಗಳೂರು, ದಿನಾಂಕ : 14-12-2010**

ಅಂಗವಿಕಲರ ಹಾಗೂ ಹಿರಿಯ ನಾಗರಿಕರ ಕಲ್ಯಾಣ ಇಲಾಖೆಯ ಅಂಗವಿಕಲ ಮಕ್ಕಳ ಕೇಂದ್ರೀಕೃತ ವಿಶೇಷ ಶೈಕ್ಷಣಿಕ ರಾಜ್ಯ ಸಹಾಯಧನದ ಹೊಸ ಯೋಜನೆಯನ್ನು ಜಾರಿಗೊಳಿಸಲು ಸರ್ಕಾರೇತರ ಸಂಸ್ಥೆಗಳು ಕನಿಷ್ಠ 3 ವರ್ಷಗಳ ಅವಧಿಯವರೆಗೆ ನಿರ್ವಹಿಸಿರುವ ಶಾಲೆಗಳನ್ನು ಪರಿಗಣಿಸಿ, ಈ ಕೆಳಕಂಡ ಮಾರ್ಗಸೂಚಿಗಳನ್ನು ನಿರ್ದೇಶಕರು, ಅಂಗವಿಕಲರ ಮತ್ತು ಹಿರಿಯ ನಾಗರಿಕರ ಕಲ್ಯಾಣ ಇಲಾಖೆ ಇವರು ಕಟ್ಟುನಿಟ್ಟಾಗಿ ಪಾಲಿಸುವ ಷರತ್ತಿಗೊಳಪಟ್ಟು ಮಂಜೂರಾತಿ ನೀಡಲಾಗಿದೆ.

ಮಾರ್ಗಸೂಚಿ :

1. Institutions for education or training of physically/mentally challenged children should not be started without taking permission from the Director of Disabled Welfare. In case an institution is already running, it should formally apply for permission.
2. Eligibility for Grant-in-aid will arise when the institution has been run as per norms for 3 years after taking such permission.
3. The grant permissible will be based on the strength of students. Government will have no obligation to pay salary or any benefit to the teaching or non-teaching staff of the institution. Grant once sanctioned can later be varied or even stopped in case the number of students changes or if any other eligibility condition is violated.
4. As the students will be special children, it should be ensured by the Director, Disabled Welfare that all the teaching and supporting staff have got the required qualification and training and that they have to be

appointed on merit through a transparent process after giving proper advertisement. It should also be ensured that all relevant Government guidelines are followed in this regard. Confirmation of staff will be a separate process and sanction of grants will not mean automatic confirmation of staff. Any recruitment or change of staff should be done only with the concurrence of the Director of Disabled Welfare.

5. There should be a compulsory annual inspection of every such schools by the Director of Disabled Welfare to see that the grant conditions are being followed satisfactorily.
6. In view of the economy orders, not more than 20 such schools should be considered during the year 2010-11. During the subsequent years depending on the budget provision, the department shall send further proposals to Government for further action.

ಈ ಆದೇಶವನ್ನು ಯೋಜನಾ ಇಲಾಖೆ ಮತ್ತು ಆರ್ಥಿಕ ಇಲಾಖೆ (ವೆಚ್ಚ–3) ಶಾಖೆಗಳು ಕ್ರಮವಾಗಿ ನೀಡಿದ ಟಿಪ್ಪಣಿ ಸಂಖ್ಯೆ : ಪಿಡಿ 11 ಐಎಂಎಂ 10 ದಿನಾಂಕ 26–04–2010 ಮತ್ತು ಎಫ್‌ಡಿ 272 ವೆಚ್ಚ–3/10 ದಿನಾಂಕ 29–10–2010ರ ಅಭಿಪ್ರಾಯ/ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ. ಕಮಲಮ್ಮ,**
ಸರ್ಕಾರದ ಅಧೀನ ಕಾರ್ಯದರ್ಶಿ–2,
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

## ಸರ್ಕಾರದ ಆದೇಶ ಸಂಖ್ಯೆ : ಮಮಇ 109 ಪಿಎಚ್‌ಪಿ 2010, ದಿನಾಂಕ 14–12–2010 ಕ್ಕೆ ಅನುಬಂಧಗಳು

## ಅಂಗವಿಕಲ ಮಕ್ಕಳ ಕೇಂದ್ರೀಕೃತ ವಿಶೇಷ ಶೈಕ್ಷಣಿಕ ರಾಜ್ಯ ಸಹಾಯಧನದ ಹೊಸ ಯೋಜನೆ

ಪೀಠಿಕೆ :

ಕರ್ನಾಟಕ ರಾಜ್ಯದಲ್ಲಿ 2001 ರ ಜನಗಣತಿ ಆಧರಿಸಿ 9.40 ಲಕ್ಷ ಅಂಗವಿಕಲರು ಇರುತ್ತಾರೆ. 0.19 ವರ್ಷದೊಳಗಿನ ಅಂಗವಿಕಲರ ಸಂಖ್ಯೆ ಅಂದಾಜು 3.67 ಲಕ್ಷವೆಂದು ಪರಿಗಣಿಸಲಾಗಿದೆ.

ಅಂಗವಿಕಲರ ಹಾಗೂ ಹಿರಿಯ ನಾಗರಿಕರ ಕಲ್ಯಾಣ ಇಲಾಖೆಯು ಅಂಗವಿಕಲರಿಗಾಗಿ ಹಲವಾರು ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುತ್ತಿದ್ದು ಈ ಕಾರ್ಯಕ್ರಮಗಳು ಅಂಗವಿಕಲರನ್ನು ಸಾಮಾನ್ಯ ಜನರಂತೆ ಬದುಕಲು ನೆರವು ಮಾಡಿ ಅವರನ್ನು ಸಮಾಜದ ಮುಖ್ಯವಾಹಿನಿಗೆ ತರುವ ಪ್ರಮುಖ ಧ್ಯೇಯೋದ್ದೇಶಗಳನ್ನು, ಗುರಿಗಳನ್ನು ಇಟ್ಟುಕೊಂಡಿದೆ. ಇಲಾಖೆಯು ಹಮ್ಮಿಕೊಂಡಿರುವ ಕಾರ್ಯಕ್ರಮಗಳಲ್ಲಿ ಶೈಕ್ಷಣಿಕ ಕಾರ್ಯಕ್ರಮವು ಪ್ರಮುಖವಾಗಿದೆ.

ಸಾರ್ವತ್ರಿಕ ಪ್ರಾಥಮಿಕ ಶಿಕ್ಷಣ ನೀತಿ, ರಾಷ್ಟ್ರೀಯ ಶಿಕ್ಷಣ ನೀತಿ, ಹಾಗೂ ಅಂಗವಿಕಲರ ಅಧಿನಿಯಮ–1995 ರನ್ವಯ 6 ರಿಂದ 18 ನೇ ವಯೋಮಿತಿಯ ಎಲ್ಲಾ ಮಕ್ಕಳಿಗೆ ಉಚಿತ ಶಿಕ್ಷಣವನ್ನು ನೀಡುವುದು ಅತ್ಯವಶ್ಯಕವಾಗಿರುತ್ತದೆ. ಅಲ್ಲದೇ ಅಂಗವಿಕಲ ಮಕ್ಕಳಿಗೆ ವಿಶೇಷ ಶಾಲೆಗಳನ್ನು ಸರ್ಕಾರದಿಂದ / ಖಾಸಗಿ ವಲಯದಿಂದ ಕಡ್ಡಾಯವಾಗಿ ನಡೆಸುವುದು ಸಹ ಸರ್ಕಾರದ ಮುಖ್ಯ ಜವಾಬ್ದಾರಿಯಾಗಿರುತ್ತದೆ. ಅಂಗವಿಕಲರಿಗೆ ವಿಶೇಷ ಶಿಕ್ಷಣ/ತರಬೇತಿ ನೀಡಲು ರಾಜ್ಯದಲ್ಲಿ ಸುಮಾರು 300 ವಿಶೇಷ ಶಾಲೆಗಳನ್ನು ಸ್ವಯಂ ಸೇವಾ ಸಂಸ್ಥೆಗಳ ಮೂಲಕ ನಡೆಸಲಾಗುತ್ತಿದೆ. ವಿವಿಧ ಅಂಗವಿಕಲತೆ ಹೊಂದಿರುವ ಅಂಗವಿಕಲ ಮಕ್ಕಳು ಹೆಚ್ಚಾಗಿ ಗ್ರಾಮೀಣ ಪ್ರದೇಶದಲ್ಲಿ ವಾಸಿಸುತ್ತಿದ್ದು ಸಾಮಾನ್ಯ ಶಾಲೆಗಳಲ್ಲಿ ವ್ಯಾಸಂಗ ಮಾಡಲು ಶಕ್ತರಾಗಿರುವುದಿಲ್ಲ. ಅವರುಗಳಿಗೆ ಆದಷ್ಟು ಅವರು ವಾಸಿಸುವ ಪರಿಸರದಲ್ಲಿಯೇ ವಿಶೇಷ ಶಿಕ್ಷಣವನ್ನು ನೀಡುವ ಸೌಲಭ್ಯವನ್ನು ಒದಗಿಸಬೇಕಾಗುತ್ತದೆ. ಅಂಗವಿಕಲ ಮಕ್ಕಳಿಗೆ ಉತ್ತಮ ಗುಣಮಟ್ಟದ ಶಿಕ್ಷಣ ನೀಡುವಲ್ಲಿ ಅವರಿಗೆ ವಿಶೇಷ ಶಾಲೆಗಳಲ್ಲಿ ಉತ್ತಮ ಮೂಲಭೂತ ಸೌಕರ್ಯ, ಸೂಕ್ತ ಕಟ್ಟಡ, ಜೀವನ ಕೌಶಲ್ಯ, ವೃತ್ತಿಪರ ತರಬೇತಿ ಮುಂತಾದ ಸಮಗ್ರ ಶಿಕ್ಷಣ ಸೌಲಭ್ಯವನ್ನು ನೀಡಬೇಕಾಗುತ್ತದೆ. ಇದರಿಂದ ಅಂಗವಿಕಲ ಮಕ್ಕಳ ಸರ್ವತೋಮುಖ ಬೆಳವಣಿಗೆಗೆ ಸಹಕಾರಿಯಾಗುತ್ತದೆ. ಈ ದಿಶೆಯಲ್ಲಿ ಪ್ರಸ್ತುತ ಜಾರಿಯಲ್ಲಿರುವ ಅನುದಾನ ಸಂಹಿತೆ–1982ರಡಿ ವಿಶೇಷ ಶಾಲೆಗಳಿಗೆ ನೀಡುತ್ತಿರುವ ಸಹಾಯಧನವು ಶಿಕ್ಷಕರ ಕೇಂದ್ರೀಕೃತವಾಗಿದ್ದು ಇದನ್ನು ಪರಿಷ್ಕರಿಸಿ ಅಂಗವಿಕಲ ಮಕ್ಕಳನ್ನು ಆಧರಿಸಿ ಅವರಿಗೆ ಸಂಪೂರ್ಣ ಗುಣಾತ್ಮಕ ಶೈಕ್ಷಣಿಕ ಸೇವಾ ಸೌಲಭ್ಯವನ್ನು ಒದಗಿಸುವ ಸಲುವಾಗಿ ವಿಶೇಷ ಶಾಲೆಗಳನ್ನು ನಡೆಸುವ ಸ್ವಯಂ ಸೇವಾ ಸಂಸ್ಥೆಗಳಿಗೆ ಸಹಾಯಧನ ನೀಡುವ ಸಲುವಾಗಿ ಈ ಕೆಳಕಂಡಂತೆ ಯೋಜನೆಯನ್ನು ರೂಪಿಸಿದೆ.

ಈ ಯೋಜನೆಯನ್ನು ಅನುಷ್ಠಾನಗೊಳಿಸಲು ಮಾನ್ಯ ಮುಖ್ಯಮಂತ್ರಿಯವರು 2010–11ನೇ ಸಾಲಿನ ಆಯವ್ಯಯದ ಭಾಷಣದಲ್ಲಿ ರೂ.10.00 ಕೋಟಿ ಆಯವ್ಯಯವನ್ನು ಘೋಷಿಸಿರುತ್ತಾರೆ. ಈ ಯೋಜನೆಗೆ ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ : 2235–02–800–0–04 ಯೋಜನೆ ಉಪ ಲೆಕ್ಕ ಶೀರ್ಷಿಕೆ : 301 ಸಹಾಯಧನದಡಿ ಭರಿಸಲು ಅನುಮೋದನೆ ದೊರೆತಿರುತ್ತದೆ.

**ಯೋಜನೆಯ ಹೆಸರು : ಅಂಗವಿಕಲ ಮಕ್ಕಳ ಕೇಂದ್ರೀಕೃತ ವಿಶೇಷ ಶೈಕ್ಷಣಿಕ ರಾಜ್ಯ ಸಹಾಯಧನ ಯೋಜನೆ :**

**ಉದ್ದೇಶ :**

1. ಅಂಗವಿಕಲರ ಕಾಯ್ದೆ–95 ನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸುವುದು.
2. ವಿಶೇಷ ಮಕ್ಕಳ ಶಿಕ್ಷಣಕ್ಕೆ ಸೂಕ್ತ ಪರಿಸರವನ್ನು ಕಲ್ಪಿಸುವುದು.
3. ಸಂವಿಧಾನದಲ್ಲಿ ಸರ್ವರಿಗೂ ಶಿಕ್ಷಣ ಹಕ್ಕು ಸೂಚಿಸಿದಂತೆ ಅಂಗವಿಕಲ ಮಕ್ಕಳಿಗೂ ಶಿಕ್ಷಣದ ಹಕ್ಕನ್ನು ನೀಡುವುದು.
4. ಎಲ್ಲಾ ಅಂಗವಿಕಲ ಮಕ್ಕಳಿಗೂ ಶೈಕ್ಷಣಿಕ ಸೌಲಭ್ಯ ಒದಗಿಸುವುದು.
5. ಅಂಗವಿಕಲ ಮಕ್ಕಳಲ್ಲಿ ಶೇ. 100 ರಷ್ಟು ಸಾಕ್ಷರತೆಯನ್ನು ಮೂಡಿಸುವುದು.
6. ಅಂಗವಿಕಲ ಮಕ್ಕಳನ್ನು ಇತರೆ ಸಾಮಾನ್ಯ ಪ್ರಜೆಗಳಂತೆ ರಾಷ್ಟ್ರದ ಪ್ರಗತಿಗೆ ಸಹಕಾರಿಯಾಗುವಂತೆ ಮಾಡುವುದು.
7. ಸೂಕ್ತ ಶೈಕ್ಷಣಿಕ ವಾತಾವರಣವನ್ನು ನಿರ್ಮಿಸಿ ಅಂಗವಿಕಲ ಮಕ್ಕಳಿಗೆ ಶಿಕ್ಷಣ ನೀಡಿ ನಂತರ ಸಾಮಾನ್ಯ ಶಾಲೆಗಳಲ್ಲಿ ಶಿಕ್ಷಣ ಪಡೆಯಲು ಸಹಕಾರಿಯಾಗುವುದು.
8. ಅಂಗವಿಕಲ ಮಕ್ಕಳ ಶೈಕ್ಷಣಿಕ ಕಾರ್ಯಕ್ರಮಕ್ಕೆ ಸ್ವಯಂ ಸೇವಾ ಸಂಸ್ಥೆಗಳಿಗೆ ಪ್ರೋತ್ಸಾಹ ನೀಡುವುದು.

## FOREST, ECOLOGY AND ENVIRONMENT SECRETARIAT

**Sub:** Diversion of 2.388 ha. of forest land in Kolar and Bangalore Rural Division for widening of 4/6 lane from 237 to 318 Kms. In NH 4 (Bangalore-Kolar-Mulabagil Section) in favour of National Highway Authority of India, Bangalore.

**Read:**
1. Letter No. A5(5)GFL.CR-29/08-09, dated : 8-2-2010 of Principal Chief Conservator of Forests Bangalore.
2. State Government letter No. FEE 29 FLL 2010, dated : 20-3-2010.
3. Letter No. 4-KRB696/2010-BAN/6934, dated : 9-4-2010. of Govenrment of India, Ministry of Environment and Forests, Regional Office (Southern Zone), Bangalore.
4. Letter No. A5(4)GFL.CR-29/08-09, dated : 17-8-2010 of Principal Chief Conservator of Forests, Bangalore.
5. State Government letter No. FEE 29 FLL 2010, dated : 11-10-2010.
6. Letter No. 4-KRB696/2010-BAN/8161, dated 11-11-2010 of Govenrment of India, Ministry of Environment and Forests, Regional Office (Southrn Zone), Bangalore.

**PREAMBLE:**

The Principal Chief Conservator of Forests, Bangalore vide his letter dated : 8-2-2010 read at (1) above has submitted a proposal to State Government to obtain approval of Government of India under Section 2 of the Forest (Conservation) Act, 1980 for diversion of 2.388 ha. of forest land in Kolar and Bangalore Rural Division for widening of 4/6 lane from 237 to 318 Kms. in NH 4 (Bangalore-Kolar-Mulabagil Section) in favour of National Highway Authority of India, Bangalore subject to certain conditions.

Accordingly, the proposal was recommended to Government of India Ministry of Environment and Forests, Regional Office (Southern Zone), Bangalore vide State Government letter dated : 20-3-2010 read at (2) above.

After careful consideration of the proposal of the State Government, Government of India vide its letter dated : 9-4-2010 read at (3) above has agreed in-principle (Stage-I) approval subject to the fulfillment of certain conditions.

In compliance of the conditions stipulated by Government of India vide its letter dated : 9-4-2010 the Principal Chief Conservator of Forests vide his letter dated : 17-8-2010 read at (4) above has sent his compliance report. This compliance report was forwarded to Government of India vide State Government letter dated : 11-10-2010 read at (5) above.

Government of India vide its letter dated : 11-11-2010 read at (6) above has conveyed its final approval (Stage-II) under Section 2 of The Forest (Conservation) Act, 1980 for diversion of 2.388 ha. of forest land in Kolar and Bangalore Rural Division for widening of 4/6 lane from 237 to 318 Kms. in NH 4 (Bangalore-Kolar-Mulabagil Section) in favour of National Highway Authority of India, Bangalore subject to certain conditions.

The proposal has been examined in detail and hence the order.

**GOVERNMENT ORDER NO: FEE 29 FLL 2010, BANGALORE DATED; 27th December 2010**

In the circumstances explained in the preamble above, Government is pleased to accord approval under Section 2 of The Forest (Conservation) Act, 1980 for diversion of 2,388 ha. of forest land in Kolar and Bangalore Rural Division for widening of 4/6 lane from 237 to 318 Kms. in NH 4 (Bangalore-Kolar-Mulabagilu Section) in favour of National Highway Authority of India, Bangalore subject to the following conditions.

1. The legal status of the forest land shall remain unchanged.
2. The demarcation of the proposed forest area shall be carried out by erecting cement concrete pillars duly numbered at an interval of 20 meters at the cost of user agency.
3. The compensatory afforestation shall be raised over 2.388 ha. identified non-forest land in Sy. No. 10 of Chaluvanahalli village, Vakkaleri Hobli, Kolar Taluk, Kolar District at the cost of user agency. The State Government shall obtain prior permission of Central Government for change of location and schedule of compensatory afforestation, if any.
4. A venue plantation shall be raised on either side of the road at the cost of user agency.
5. The additional amount of the Net Present Value (NPV) of the diverted forest land if any becoming due after revision of the same by the Hon'ble Supreme Court of India in future, shall be charged by the State Government from the user agency and the same shall be transferred to Ad-hoc CAMPA in account No. CA-1582 of Corporation Bank, Block-II, CGO Complex, Phase-I, Lodhi Road, New Delhi-110 003.
6. Non-forest land for compensatory afforestation shall be notified by the State Government as P.F/R.F and Nodal Officer (FCA) shall report the compliance with in six months.
7. The total forest area utilized for the project shall not exceed 2.388 ha. In case the land is not taken over by the user agency or the same is not used for the stipulated purpose within a period of two years, then the area shall be taken back by the Forest Department.
8. The lease is for a period of 20 years.
9. If the land is not utilized for the purpose within 2 years and also if any violation is found of the stipulated conditions, the forest land shall revert back to Department after due approval from Government, by the Conservator of Forests under Section 82 (read with Rule 69 of Karnataka Forest Rules 1969) of Karnataka Forest Act 1963.

**10.** Whenever in future the subject land will no more required for the intended purpose, then it should automatically revert back to the Forest Department.

**11.** The user agency has to pay the lease rent as fixed by the Government at the time of sanction and any subsequent orders in this regard.

**12.** The Karnataka Forest Act 1963 and Rule 1969 will be applicable for any violation.

**13.** Only minimum number of trees shall be cut out of the enumerated list based on actual requirement of the project.

**14.** The user agency shall pay the extraction and transportation charges of trees as estimated by the Deputy Conservator of Forests from the proposed land.

**15.** The user agency shall pay the cost of raising compensatory afforestation at the rate prevailing at the time of sanction (at present it is Rs. 94,000-00 per ha.).

**16.** The lessee has to pay the Net Present Value (NPV) as per the Hon'ble Supreme Court of India Orders dated : 28-3-2008 and 9-5-2008 depending upon the quantity and density of the land as determined by Deputy Conservator of Forests.

**17.** The Project Authorities should pay cost of soil erosion controlling structures to be constructed within the forest area all along the road.

**18.** The shoulder drains should be suitably covered with stone pitching in order to control soil erosion.

**19.** Fire for melting of coal tar and mixing shall be lit at a safe distance from the trees/vegetation, which shall be decided by the concerned Divisional Forest Officer. For such constructions, it is better to avoid dry/hot windy seasons. For this purpose, fuelwood shall be purchased by the implementing agency in advance from the depot of State Forest Development Corporation.

**20.** No crushing/breaking of stones shall be allowed inside forest areas. Readymade materials shall be used for up-gradation of such roads.

**21.** Both sides of the upgraded roads shall be reinforced with brick/stone works and vegetative measures to check soil erosion, at the project cost in consultation with the Divisional Forest Officer.

**22.** Plantation activities, if the concerned Divisional Forest Officer finds it necessary shall be taken up along the road at the project cost immediately. The plantation shall be maintained at the project cost.

**23.** No labour camp shall be established on the forest lands.

**24.** No work shall be allowed after sunset.

**25.** Any damage to forest area due to such up-gradation works shall be compensated by the implementing agency from the project cost. The extent of damage shall be assessed by the concerned Divisional Forest Officer.

**26.** Any other condition to be stipulated by/Government of India/State Government/Principal Chief Conservator of Forests, Karnataka in the interest of conservation of forests.

By Order and in the name of the Governor of Karnataka

H.M. Mallikarjunaswamy

P.R. 221

Under Secretary to Government,

Forest, Ecology and Environment Department

## ಸಹಕಾರ ಸಚಿವಾಲಯ

**ವಿಷಯ :** ವಾಣಿವಿಲಾಸ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಹಿರಿಯೂರು, ಚಿತ್ರದುರ್ಗ ಜಿಲ್ಲೆ ಇದರ ವಿಶೇಷಾಧಿಕಾರಿಗಳ ಅವಧಿಯನ್ನು ವಿಸ್ತರಿಸುವ ಕುರಿತು.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ: ಸಇ 14 ಸಸಕಾ 2009, ದಿನಾಂಕ: 14–12–2009.

2. ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರ ಪತ್ರ ಸಂಖ್ಯೆ : ಡಿಎಸ್‌ಕೆ : ಇಎಸ್‌ಟಿಎಸ್ : 76 : 2003–04, ದಿನಾಂಕ 23–9–2010.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಆದೇಶ ದಿನಾಂಕ : 14–12–2009 ರಲ್ಲಿ ವಾಣಿವಿಲಾಸ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಹಿರಿಯೂರು, ಚಿತ್ರದುರ್ಗ ಜಿಲ್ಲೆ ಇದರ ವಿಶೇಷಾಧಿಕಾರಿಗಳ ಕರ್ತವ್ಯದ ಅವಧಿಯನ್ನು ದಿನಾಂಕ : 30–9–2008 ರಿಂದ ದಿನಾಂಕ : 20–9–2010 ರವರೆಗೆ ವಿಸ್ತರಿಸಿ ಆದೇಶಿಸಲಾಗಿದೆ.

ಮೇಲೆ ಓದಲಾದ (2) ರ ಪತ್ರ ದಿನಾಂಕ : 23–9–2010 ರಲ್ಲಿ ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು, ವಾಣಿವಿಲಾಸ ಸಹಕಾರ ಸಕ್ಕರೆ ಕಾರ್ಖಾನೆ ನಿ., ಹಿರಿಯೂರು, ಚಿತ್ರದುರ್ಗ ಜಿಲ್ಲೆ ಇದರ ವಿಶೇಷಾಧಿಕಾರಿಗಳ ಅವಧಿಯು ದಿನಾಂಕ : 29–9–2010 ಕ್ಕೆ ಕೊನೆಗೊಂಡಿರುವುದರಿಂದ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಪ್ರಕರಣ 31(1) ನಿಯಮವನ್ನು ಸಡಿಲಿಸಿ ವಾಣಿವಿಲಾಸ ಸಹಕಾರ ಸಕ್ಕರೆ ಕಾರ್ಖಾನೆ ನಿ., ಹಿರಿಯೂರು, ಚಿತ್ರದುರ್ಗ ಜಿಲ್ಲೆ ಇದರ ವಿಶೇಷಾಧಿಕಾರಿಗಳ ಕರ್ತವ್ಯದ ಅವಧಿಯನ್ನು ದಿನಾಂಕ : 30–9–2010 ರಿಂದ ದಿನಾಂಕ : 29–9–2011 ರವರೆಗೆ ವಿಸ್ತರಿಸುವಂತೆ ಕೋರಿರುತ್ತಾರೆ.

ಮೇಲಿನ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಇ 28 ಸಸಕಾ 2010, ಬೆಂಗಳೂರು, ದಿನಾಂಕ : 20–12–2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಪ್ರಕರಣ 31(1)ನ್ನು ಸಡಿಲಿಸಿ ವಾಣಿವಿಲಾಸ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಹಿರಿಯೂರು, ಚಿತ್ರದುರ್ಗ ಜಿಲ್ಲೆ ಇದರ ವಿಶೇಷಾಧಿಕಾರಿಗಳ ಕರ್ತವ್ಯದ ಅವಧಿಯನ್ನು ದಿನಾಂಕ : 30–9–2010 ರಿಂದ ದಿನಾಂಕ : 29–9–2011 ರವರೆಗೆ ವಿಸ್ತರಿಸಿ ಆದೇಶಿಸಲಾಗಿದೆ.

ಕರ್ನಾಟಕ ಸಹಕಾರ ಸಂಘಗಳ ಅಧಿನಿಮಯ 1959ರ ಪ್ರಕರಣ 31(1)ರ ಉಪಬಂಧಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ : 29–9–2011 ರವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಪ್ರಕರಣ 31(1)ರ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
ಆರ್.ಎಸ್. ನೂಲಿ
ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ.

ಪಿ. ಆರ್. 222

## ಯುವಜನ ಸೇವಾ ಸಚಿವಾಲಯ

**ವಿಷಯ :** ಶ್ರೀ ವಿ.ಕೆ. ಗುಡೋಡಗಿ, ನಿವೃತ್ತ ಜಂಟಿ ನಿರ್ದೇಶಕರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ, ಅವರು ನಿವೃತ್ತಿ ಸೌಲಭ್ಯಗಳನ್ನು ಬಿಡುಗಡೆ ಮಾಡಲು ಕೋರಿ ಸಲ್ಲಿಸಿರುವ ಮನವಿಗಳನ್ನು ಇತ್ಯರ್ಥಪಡಿಸುವ ಬಗ್ಗೆ.

**ಓದಲಾಗಿದೆ :**
1. ಶ್ರೀ ವಿ.ಕೆ. ಗುಡೋಡಗಿ ಅವರು ಸಲ್ಲಿಸಿರುವ ಮನವಿ ದಿನಾಂಕ : 24–10–2008 ಹಾಗೂ ದಿನಾಂಕ : 26–12–2009 (ಎರಡು ಮನವಿಗಳು).
2. ಅರ್ಜಿ ಸಂಖ್ಯೆ : 3219/2010ರಲ್ಲಿ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ದಿನಾಂಕ : 30–8–2010ರ ಆದೇಶ.
3. ಸರ್ಕಾರಿ ಆದೇಶ ಸಂಖ್ಯೆ : ಯುಸೇಇ 77 ಯುಇಸೇ 2010, ದಿನಾಂಕ : 6–12–2010.
4. ಸರ್ಕಾರದ ಅಧಿಸೂಚನೆ ಸಂಖ್ಯೆ : ಯುಸೇಇ 125 ಯುಇಸೇ 2010, ದಿನಾಂಕ : 15–12–2010.

**ಪ್ರಸ್ತಾವನೆ :**

ಶ್ರೀ ವಿ.ಕೆ. ಗುಡೋಡಗಿ, ನಿವೃತ್ತ ಜಂಟಿ ನಿರ್ದೇಶಕರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ, ಬೆಂಗಳೂರು ಅವರು ಮೇಲೆ (1) ರಲ್ಲಿ ಓದಲಾದ ದಿನಾಂಕ : 24–10–2008 ರ ಮನವಿಯನ್ನು ಆಯುಕ್ತರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ ಅವರಿಗೆ ಸಲ್ಲಿಸಿ ತಾವು 30–4–2007 ರಂದು ಸರ್ಕಾರಿ ಸೇವೆಯಿಂದ ವಯೋ ನಿವೃತ್ತಿ ಹೊಂದಿದ್ದು, ಮಹಾಲೇಖಪಾಲರು ನೀಡಿದ ಮಾಹಿತಿಯಂತೆ ತಮ್ಮ ಖಾತೆಯಲ್ಲಿ ಇರುವ 220 ದಿನಗಳ ಗಳಿಕೆ ರಜೆ ನಗದೀಕರಣ ಸೌಲಭ್ಯವನ್ನು ಬಿಡುಗಡೆ ಮಾಡುವಂತೆ ಕೋರಿದರು. ಈ ಸಂಬಂಧ ಅವರಿಗೆ ಆಯುಕ್ತರು ಈ ಹಿಂದೆ ನೀಡಿದ ದಿನಾಂಕ : 7–7–2007ರ ಹಿಂಬರಹವನ್ನು ಪ್ರಶ್ನಿಸಿದ್ದು, ಅದರ ಪ್ರತಿಯನ್ನು ಸರ್ಕಾರದ ಕಾರ್ಯದರ್ಶಿ, ಯುವಜನ ಸೇವಾ ಇಲಾಖೆ ಅವರಿಗೆ ಗುರುತಿಸಿದರು. ಸದರಿ ಅರ್ಜಿಯ ಮೇಲೆ ದಿನಾಂಕ 29–11–2008ರ ಪತ್ರದಲ್ಲಿ ಆಯುಕ್ತರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ ಅವರ ವರದಿಯನ್ನು ಕೇಳಲಾಯಿತು. ಸದರಿ ಪತ್ರವನ್ನನುಸರಿಸಿ ಪರಿಶೀಲನೆ ಮಾಡಿದ ನಿರ್ದೇಶಕರು ದಿನಾಂಕ : 29–7–2009 ರ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿ ಶ್ರೀ ವಿ.ಕೆ. ಗುಡೋಡಗಿ ಅವರ ವಿರುದ್ಧ ಲೋಕಾಯುಕ್ತದಲ್ಲಿ ಬಾಕಿ ಇರುವ ವಿಚಾರಣೆಯಲ್ಲಿ ಸನ್ಮಾನ್ಯ ಲೋಕಾಯುಕ್ತರ ಶಿಫಾರಸ್ಸಿನ ವಿರುದ್ಧ ನಿವೃತ್ತ ಅಧಿಕಾರಿಯು ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಅರ್ಜಿ ಸಂಖ್ಯೆ : 7246/2003 ಸಲ್ಲಿಸಿ ತಡೆಯಾಜ್ಞೆ ತಂದಿದ್ದು, ಅದು 22–10–2008 ರಂದು ತೀರ್ಪು ನೀಡಲ್ಪಟ್ಟ ಕಾರಣ ಅದುವರೆಗೆ ವಿಚಾರಣೆ ಮುಂದುವರೆಸಲು ಸಾಧ್ಯವಾಗಲಿಲ್ಲವೆಂದು ತಿಳಿಸಿದರು. ನಿವೃತ್ತ ಅಧಿಕಾರಿಯ ಹಕ್ಕಿನಲ್ಲಿರುವ 220 ದಿನಗಳ ಗಳಿಕೆ ರಜೆ ನಗದೀಕರಣ ಸೌಲಭ್ಯವನ್ನು ಬಿಡುಗಡೆ ಮಾಡುವ ಕುರಿತು ಮಹಾಲೇಖಪಾಲರು ಅಧಿಕಾರಿಯ ವಿರುದ್ಧ ಯಾವುದೇ ಇಲಾಖಾ ವಿಚಾರಣೆ ಬಾಕಿ ಇಲ್ಲವೆಂಬ ದೃಢೀಕರಣ ಪತ್ರ ಕೇಳುವ ಕಾರಣ ಹಾಗೂ ನಿವೃತ್ತ ಅಧಿಕಾರಿಯ ವಿರುದ್ಧ ಈ ವಿಚಾರಣೆ ಅಲ್ಲದೇ ಮತ್ತೊಂದು ವಿಚಾರಣೆ ಬಾಕಿ ಇರುವ ಕಾರಣ ಸರ್ಕಾರದ ಮಟ್ಟದಲ್ಲಿ ಈ ಬಗ್ಗೆ ಸೂಕ್ತ ನಿರ್ಣಯ ಕೈಗೊಳ್ಳುವಂತೆ ಕೋರಿದೆ.

ಶ್ರೀ ವಿ.ಕೆ. ಗುಡೋಡಗಿ, ಅವರು ದಿನಾಂಕ : 26–12–2009 ರಂದು ಒಟ್ಟು ಎರಡು ಮನವಿಗಳನ್ನು ಸಲ್ಲಿಸಿದ್ದಾರೆ. ಅದರಲ್ಲಿ ಒಂದು 24–10–2008ರ ಮನವಿಯ ಮುಂದುವರೆದ ಭಾಗವಾಗಿದೆ. ಮತ್ತೊಂದು ಮನವಿಯಲ್ಲಿ ನಿವೃತ್ತ ಅಧಿಕಾರಿಯು ತಾನು ಮತ್ತು ತನ್ನ ಪತ್ನಿಯು ವೃದ್ಧಾಪ್ಯ ವಯೋಮಾನ ಸಂಬಂಧಿ ಕಾಯಿಲೆಗಳಿಂದ ನರಳುತ್ತಿದ್ದು, ಅವರ ಮಗನ ಮದುವೆ ಸಂಬಂಧ ಮಾಡಲಾದ ಸಾಲವನ್ನು ಮರುಪಾವತಿ ಮಾಡಲು ಸಾಧ್ಯವಾಗದೆ ತೊಳಲಾಡುತ್ತಿರುವ ಕಾರಣ ತಮ್ಮ ವಿರುದ್ಧ ಇರುವ ವಿಚಾರಣೆಗಳಿಂದಾಗಿ ತಡೆ ಹಿಡಿಯಲಾದ ನಿವೃತ್ತಿ ಸೌಲಭ್ಯಗಳಾದ ಡಿ.ಸಿ.ಆರ್.ಜಿ ಹಾಗೂ ವಿಶ್ರಾಂತಿ ವೇತನದ ಪರಿವರ್ತಿತ ಮೊತ್ತವನ್ನು ಮಾನವೀಯತೆ ಹಾಗೂ ಅನುಕಂಪದ ದೃಷ್ಟಿಯಿಂದ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಈ ಎಲ್ಲಾ ಅಂಶಗಳನ್ನು ಪರಿಶೀಲಿಸಿ ಶ್ರೀ ವಿ.ಕೆ. ಗುಡೋಡಗಿ, ಅವರು ಕೋರಿರುವಂತೆ ಗಳಿಕೆ ರಜೆ ನಗದೀಕರಣವೂ ಸೇರಿದಂತೆ ಅವರ ಎಲ್ಲಾ ನಿವೃತ್ತಿ ಸೌಲಭ್ಯಗಳನ್ನು ಬಿಡುಗಡೆ ಮಾಡಬಹುದೆ ಎಂಬ ಅಂಶವನ್ನು ಸರ್ಕಾರದ ಹಂತದಲ್ಲಿ ಪರಿಶೀಲಿಸಲಾಯಿತು. ಕೆ.ಸಿ.ಎಸ್.ಆರ್. ನಿಮಯ 118ಎ(4) ರನ್ವಯ ನಿವೃತ್ತಿ ಹೊಂದಿದ ನೌಕರನ ವಿರುದ್ಧ ಯಾವುದೇ ಇಲಾಖಾ ವಿಚಾರಣೆ/ಕ್ರಿಮಿನಲ್ ಮೊಕದ್ದಮೆ ಬಾಕಿ ಇದ್ದಲ್ಲಿ ಹಾಗೂ ಸದರಿ ವ್ಯವಹರಣೆ ಮುಕ್ತಾಯಗೊಂಡ ನಂತರ ಅವನಿಂದ ಸ್ವಲ್ಪ ಹಣವನ್ನು ವಸೂಲು ಮಾಡಬೇಕಾಗುವ ಸಾಧ್ಯತೆ ಒದಗಿ ಬರುವ ಸಂಭವವಿದ್ದಲ್ಲಿ ಗಳಿಕೆ ರಜೆಗೆ ಸಮನಾದ ಇಡಿ ಮೊತ್ತವನ್ನು ಅಥವಾ ಅದರ ಯಾವುದೇ ಭಾಗವನ್ನು ತಡೆಹಿಡಿಯಬಹುದಾಗಿದೆ. ಹಾಗೆಯೇ ಕೆ.ಸಿ.ಎಸ್.ಆರ್. ನಿಯಮ 214–ಎ(1) ರನ್ವಯ ಇಲಾಖಾ ವಿಚಾರಣೆ ಹೂಡಲ್ಪಟ್ಟಿದ್ದು ನಿವೃತ್ತಿ ಹೊಂದಿದ ಸರ್ಕಾರಿ ನೌಕರನ ಡಿಸಿಆರ್‌ಜಿ ಸೌಲಭ್ಯವನ್ನು ತಡೆಹಿಡಿಯಬೇಕೆಂದು ನಿಗದಿಪಡಿಸಿದೆ. ಈ ಎಲ್ಲಾ ಅಂಶಗಳನ್ವಯ ಪರಿಶೀಲಿಸಿ ಶ್ರೀ ವಿ.ಕೆ. ಗುಡೋಡಗಿ, ನಿವೃತ್ತ ಜಂಟಿ ನಿರ್ದೇಶಕರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ ಅವರ ವಿರುದ್ಧ 2 ಇಲಾಖಾ

ವಿಚಾರಣೆಗಳು ಬಾಕಿ ಇರುವ ಕಾರಣ ಅದರಲ್ಲಿ ಒಂದು ವಿಚಾರಣೆಯಲ್ಲಿ ಸಾಬೀತಾದ ಆರೋಪದ ಪರಿಣಾಮ ಅವರಿಂದ ಹಣವನ್ನು ವಸೂಲಿ ಮಾಡಬೇಕಿದ್ದ ಕಾರಣ ಅವರ ನಿವೃತ್ತಿ ಸೌಲಭ್ಯಗಳನ್ನು ತಡೆಹಿಡಿಯಬೇಕೆಂದು ತೀರ್ಮಾನ ಕೈಗೊಳ್ಳಲಾಯಿತು. ಆದರೆ, ಸದರಿ ತೀರ್ಮಾನವನ್ನು ಅವರಿಗೆ ತಿಳಿಸಲಿಲ್ಲ. ಅವರು ಸಲ್ಲಿಸಿದ ಮೂರು ಮನವಿಗಳಲ್ಲೂ ಸಹ ಅವರು ಹಿಂಬರಹ ನೀಡುವಂತೆ ಕೋರಿರಲಿಲ್ಲ. ಈ ಬೆಳವಣಿಗೆಗಳ ತರುವಾಯವೂ ಸಹ ಅವರು ಹಿಂಬರಹ ಕೇಳಲಿಲ್ಲ. ಅವರು ಸಚಿವಾಲಯಕ್ಕೆ ಖುದ್ದಾಗಿ ಬಂದಾಗ ಸರ್ಕಾರದ ನಿರ್ಣಯವನ್ನು ಮೌಖಿಕವಾಗಿ ತಿಳಿಸಲಾಗಿತ್ತು. ಅದರ ತರುವಾಯ ಕೆ.ಎ.ಟಿ. ಅರ್ಜಿ ಸಂಖ್ಯೆ : 3219/2010 ಸಲ್ಲಿಸಿದರು. ಸದರಿ ಅರ್ಜಿಯಲ್ಲೂ ಸಹ ಎರಡು ವಿಚಾರಣೆಗಳು ಮುಗಿದ ನಂತರವೇ ಅವರ ನಿವೃತ್ತಿ ಸೌಲಭ್ಯಗಳನ್ನು ಬಿಡುಗಡೆ ಮಾಡಲು ಸಾಧ್ಯವೆಂಬ ನಿಲುವನ್ನು ಪ್ರತಿವಾದಿಗಳ ಪರವಾಗಿ ತೆಗೆದುಕೊಳ್ಳಲಾಯಿತು.

ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ಮೇಲೆ (2) ರಲ್ಲಿ ಓದಲಾದ ದಿನಾಂಕ : 30–8–2010ರ ಆದೇಶದಲ್ಲಿ ಈ ಕೆಳಕಂಡಂತೆ ನಿರ್ದೇಶಿಸಿದೆ :–

> For the above said reasons, we allow the application in part and direct the government to consider the representations of the applicant as at Annexures A9, A12 and A13 and take a decision in the matter. His pensionary benefits, including the leave encashment benefit, shall be released forthwith preferably not later than two months from today, withholding only Rs. 2,50,000/- which can be adjusted towards the alleged loss depending upon the decision in the departmental inquiry. Other contentions of the applicant are kept open which he is at liberty to agitate, if occasion arises by filling a fresh application.

ಮಂಡಳಿಯ ಆದೇಶವನ್ನನುಸರಿಸಿ ಮೇಲೆ (3) ಮತ್ತು (4) ರಲ್ಲಿ ಓದಲಾದ ದಿನಾಂಕ : 6–12–2010 ರ ಆದೇಶ ಹಾಗೂ 15–12–2010ರ ಅಧಿಸೂಚನೆಯಲ್ಲಿ ಶ್ರೀ ವಿ.ಕೆ. ಗುಡೋಡಗಿ, ನಿವೃತ್ತ ಜಂಟಿ ನಿರ್ದೇಶಕರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ ಅವರ ಎಲ್ಲಾ ನಿವೃತ್ತಿ ಸೌಲಭ್ಯಗಳನ್ನು ರೂ. 2.5 ಲಕ್ಷಗಳನ್ನು ತಡೆ ಹಿಡಿದು ಬಿಡುಗಡೆ ಮಾಡಲಾಗಿದೆ. ಹಾಗೂ ಅವರ ದಿನಾಂಕ : 24–10–2008 ಮತ್ತು 26–12–2009ರ ಮನವಿಗಳನ್ನು ಪರಿಶೀಲಿಸಲಾಗಿದೆ. ಅವರ ದಿನಾಂಕ : 24–10–2008 ರ ಮನವಿಯು ರೂ. 1,43,625/–ಗಳ ನಷ್ಟ ಉಂಟಾಗಿದೆ ಎಂಬ ವಿಚಾರಣಾ ವರದಿಯ ನಿರ್ಣಯವನ್ನು ಪ್ರಶ್ನಿಸಿದೆ. ಈ ಆರೋಪ ಕುರಿತ ಇಲಾಖಾ ವಿಚಾರಣೆಯನ್ನು ಈಗಾಗಲೇ ಜರುಗಿಸಲಾಗಿದ್ದು ಸರ್ಕಾರಿ ಆದೇಶ ಸಂಖ್ಯೆ : ಯುಸೇಇ 16 ಯುಇಸೇ 2007, ದಿನಾಂಕ : 18–4–2007ರ ಸರ್ಕಾರಿ ಆದೇಶದಲ್ಲಿ ತಮ್ಮನ್ನು ಆರೋಪ ಮುಕ್ತರನ್ನಾಗಿಸಿದೆ. ಹೀಗಿದ್ದೂ ಸಹ ಅದೇ ಆರೋಪಗಳನ್ನು ಹೊರಿಸಿ ಮತ್ತೊಮ್ಮೆ ತಮ್ಮ ವಿರುದ್ಧ ಹೂಡಲಾಗಿದೆ ಎಂದು ಆರೋಪಿಸಿದ್ದಾರೆ. ಅವರೇ ನಿರೂಪಿಸಿರುವ ತುಲನಾತ್ಮಕ ಪಟ್ಟಿಯನ್ನು ದಾಖಲೆಗಳೊಡನೆ ಪರಿಶೀಲಿಸಲಾಗಿದೆ.

ಶ್ರೀ ವಿ.ಕೆ. ಗುಡೋಡಗಿ, ನಿವೃತ್ತ ಜಂಟಿ ನಿರ್ದೇಶಕರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ ಅವರ ವಿರುದ್ಧ ನೋಟೀಸ್ ಸಂಖ್ಯೆ : ಐಟಿವೈ 188 ಇವೈಡಬ್ಲ್ಯು 96, ದಿನಾಂಕ : 6–2–1997ರ ಮೂಲಕ ಪ್ರಾರಂಭಿಸಿ ಸರ್ಕಾರಿ ಆದೇಶ ಸಂಖ್ಯೆ : ಯುಸೇಇ 16 ಯುಇಸೇ 2007, ದಿನಾಂಕ : 18–4–2007 ರಲ್ಲಿ ಅವರನ್ನು ಆರೋಪ ಮುಕ್ತರನ್ನಾಗಿಸಿದ ಮೊದಲನೇ ವಿಚಾರಣೆಯಲ್ಲಿನ ಆರೋಪಗಳು ಸಕ್ಷಮ ಪ್ರಾಧಿಕಾರದ ಅನುಮೋದನೆ ಪಡೆದು ರೂ. 69.35 ಲಕ್ಷಗಳ ಎನ್‌ಡಿಸಿ ಬಿಲ್‌ಗಳನ್ನು ಮಹಾಲೇಖಪಾಲರಿಗೆ ಕಳುಹಿಸದ ವರ್ಗಾವಣೆಗೊಂಡ ನಂತರ ಎನ್.ಸಿ.ಎಫ್ ಗೆ ಹಣ ಪಾವತಿಸಿದ ರೂ. 4,76,895/–ಗಳನ್ನು ದುರುಪಯೋಗ ಮಾಡಿ ಮೇಲಧಿಕಾರಿಗಳ ಗಮನಕ್ಕೆ ಬಂದಾಗ ಖಜಾನೆಗೆ ವಾಪಸ್ ಮಾಡಿದ ಹಾಗೂ ವಿಶೇಷ ಘಟಕ ಯೋಜನೆಯಲ್ಲಿ ಬಿಡುಗಡೆಯಾದ ರೂ. 12 ಲಕ್ಷಗಳ ಅನುದಾನವನ್ನು ಬಳಸದೇ ಯೋಜನೆಯು ಅನುಷ್ಠಾನಗೊಳ್ಳದಿರಲು ಕಾರಣರಾದ ವಿಷಯಗಳಿಗೆ ಸಂಬಂಧಿಸಿವೆ. ಆದರೆ, ನೋಟೀಸ್ ಸಂಖ್ಯೆ : ಯುಸೇಇ 98 ಯುಇಸೇ 2005, ದಿನಾಂಕ : 1–7–2006 ರ ನೋಟೀಸ್ ನೀಡುವ ಮೂಲಕ ಪ್ರಾರಂಭಿಸಿ ಪ್ರಸ್ತುತ ಪ್ರಗತಿಯಲ್ಲಿರುವ ಎರಡನೇ ಇಲಾಖಾ ವಿಚಾರಣೆಯಲ್ಲಿನ ಆರೋಪಗಳು ಸರ್ಕಾರದಿಂದ ತನ್ನ ಸಹೋದ್ಯೋಗಿಗಳಿಗೆ ನೀಡಲ್ಪಟ್ಟ ವಿಶೇಷ ಸ್ವಯಂ ನಿವೃತ್ತಿ ಸೌಲಭ್ಯವನ್ನು ಪ್ರಶ್ನಿಸಿ ಅನಪೇಕ್ಷಣೆಯವಾಗಿ ಸರ್ಕಾರಕ್ಕೆ ಟಿಪ್ಪಣಿ ಸಲ್ಲಿಸಿ ಸ್ವಯಂ ನಿವೃತ್ತಿ ಸೌಲಭ್ಯ ನೀಡಿಕೆ ಯೋಜನೆಯ ಅನುಷ್ಠಾನವು ಅನಗತ್ಯವಾಗಿ ವಿಳಂಬಗೊಳ್ಳಲು ಕಾರಣರಾದ ಸರ್ಕಾರಿ ಆದೇಶ ಹೊರಟ ನಂತರವೂ ಸಹ ಸದರಿ ಆದೇಶದ ವಿರುದ್ಧ ಮಹಾಲೇಖಪಾಲರಿಗೆ ನೇರವಾಗಿ ದೂರು ಸಲ್ಲಿಸಿ ಸರ್ಕಾರಕ್ಕೆ ಮುಜುಗರವನ್ನುಂಟು ಮಾಡಿದ : 2004–05ನೇ ಸಾಲಿನ ಜಿಲ್ಲಾ ಪಂಚಾಯತ್ ಯೋಜನೆಯಡಿಯಲ್ಲಿ ಕೈಗೊಂಡ ಕಾರ್ಯಕ್ರಮಗಳ ಲೆಕ್ಕಪತ್ರ ತಪಾಸಣೆ ನಡೆಸಬೇಕೆಂಬ ಮೇಲಾಧಿಕಾರಿಗಳ ಆದೇಶವನ್ನು ಪಾಲಿಸದೇ ತಿರಸ್ಕರಿಸಿದ ; 12ನೇ ಹಣಕಾಸು ಆಯೋಗದ ಅನುದಾನದಲ್ಲಿ ಕೈಗೊಳ್ಳುವ ತಾಲ್ಲೂಕು ಕ್ರೀಡಾಂಗಣಗಳ ಅಂದಾಜುಪಟ್ಟಿ ತಯಾರಿಸಬೇಕೆಂಬ ಆದೇಶವನ್ನು ತಿರಸ್ಕರಿಸಿದ ; ತನ್ನ ಅವಧಿಯಲ್ಲಿ ಮಾಡಿದ ಒಟ್ಟು ರೂ. 11,87,269/–ಗಳಿಗೆ ಸರಿಯಾದ ದಾಖಲೆಗಳು, ಬಿಲ್ಲುಗಳನ್ನು ಹಾಜರು ಪಡಿಸದೆ ದುರುಪಯೋಗಪಡಿಸಿಕೊಂಡು ಆಡಿಟ್ ಆಕ್ಷೇಪಣೆಗೆ ಕಾರಣರಾದ ಹಾಗೂ ವಿವಿಧ ಯೋಜನೆಗಳಿಗೆ ನಿಗದಿಪಡಿಸಿದ ಅನುದಾನವನ್ನು ಡ್ರಾ ಮಾಡಿ ಬ್ಯಾಂಕಿನಲ್ಲಿ ಠೇವಣಿ ಇಟ್ಟು ಯೋಜನೆಗಳನ್ನು ಅನುಷ್ಠಾನಗೊಳಿಸದೆ ಕರ್ತವ್ಯ ಲೋಪವೆಸಗಿದ್ದಕ್ಕೆ ಸಂಬಂಧಿಸಿದೆ.

ಆದ್ದರಿಂದ ಎರಡನೇ ವಿಚಾರಣೆಯು ಒಂದನೇ ವಿಚಾರಣೆಯ ಪುನರಾವರ್ತನೆ ಆಗಿವೆ ಎಂಬ ಆರೋಪಿಯ ವಾದವನ್ನು ಒಪ್ಪಿಕೊಳ್ಳಲು ಸಾಧ್ಯವಾಗುವುದಿಲ್ಲ. ನಿವೃತ್ತ ಅಧಿಕಾರಿಯು ತಿಳಿಸಿರುವಂತೆ ಆರೋಪ–5 ರಲ್ಲಿ ಉಲ್ಲೇಖಿಸಿದ 11 ಲಕ್ಷ ರೂ.ಗಳಷ್ಟು ಮೊತ್ತಕ್ಕೆ ಸಂಬಂಧಪಟ್ಟಂತೆ ಆಡಿಟ್ ಆಕ್ಷೇಪಣೆಗಳನ್ನು ಕೈಬಿಡಲು ಯಾವ ಪ್ರಸ್ತಾವನೆಯು ಇರುವುದಿಲ್ಲ. ಈ ಬಗ್ಗೆಯೇ ಅವರು ಉತ್ತರಿಸಿದ ಹಾಗೂ ವಿಚಾರಣಾಧಿಕಾರಿಗಳನ್ನು ನೇಮಿಸಿದ ನಡುವಿನ ಅವಧಿಯಲ್ಲಿ ಅಮೂಲಾಗ್ರವಾಗಿ ಪರಿಶೀಲಿಸಲಾಗಿದೆ. ಹಾಗೂ ಆರೋಪದಲ್ಲಿನ ಸತ್ಯಾಸತ್ಯತೆಯು ವಿಚಾರಣೆ ನಡೆದ ನಂತರವೇ ಕಂಡುಬರುವುದೆಂದು ಮನಗಂಡ ಕಾರಣ ವಿಚಾರಣಾಧಿಕಾರಿಗಳನ್ನು ನೇಮಿಸಲಾಗಿದೆ. ಆದ್ದರಿಂದ, ಈ ವಿಚಾರಣೆ ವಿಳಂಬವಾಗಲು ಸರ್ಕಾರವು ಕಾರಣವಲ್ಲ. ಆರೋಪಿಯು ಉಲ್ಲೇಖಿಸಿರುವ ಮತ್ತೊಂದು ವಿಚಾರಣೆಯಲ್ಲಿ ಆರೋಪಿಯೇ ವಿಚಾರಣೆಗೆ ದಿನಾಂಕ : 12–9–2003 ರಂದು ಮಧ್ಯಂತರ ತಡೆಯಾಜ್ಞೆ ತಂದು ಸದರಿ ತಡೆಯಾಜ್ಞೆಯು ದಿನಾಂಕ : 22–10–2008 ರವರೆಗೂ ಜಾರಿಯಲ್ಲಿದ್ದ ಕಾರಣ ವಿಚಾರಣೆ ಮುಂದುವರಿಯಲಿಲ್ಲ. ಅವರು ಆಡಿಟ್ ಆಕ್ಷೇಪಣೆಗಳಿಗೆ ನೀಡಿರುವ ಉತ್ತರವು ಸಮರ್ಪಕವಾಗಿಲ್ಲವಾದ ಕಾರಣ ಆಡಿಟ್ ಪ್ಯಾರಾಗಳು ಇತ್ಯರ್ಥವಾಗದೇ ಉಳಿದಿವೆ. ವಾಸ್ತವಾಂಶವನ್ನು ಆದರಿಸಿ ವಿಚಾರಣೆ ಹೂಡಿರುವುದು ಕಂಡು ಬಂದ ಕಾರಣ ಸಹೋದ್ಯೋಗಿಗಳೂ ಕಾರಣವೆಂಬ ದೂರನ್ನು ಒಪ್ಪಿಕೊಳ್ಳಲು ಸಾಧ್ಯವಾಗುವುದಿಲ್ಲ. ಹಾಗೆಯೇ ಸರ್ಕಾರಕ್ಕೆ ಯಾವುದೇ ಆರ್ಥಿಕ ನಷ್ಟ ಉಂಟಾಗಿಲ್ಲವೆಂಬ ಅವರ ನಿಲುವನ್ನು ಒಪ್ಪಲು ಸಾಧ್ಯವಿಲ್ಲ.

ಉಳಿದಂತೆ ಅವರ ದಿನಾಂಕ : 26–12–2009 ರ ಎರಡು ಮನವಿಗಳು ಬಹುತೇಕ ಹಿಂದಿನ ಮನವಿಯ ಪುನರಾವರ್ತನೆಯೇ ಆಗಿವೆ. ಕೇವಲ ಡಿಸಿಆರ್‌ಜಿ ಮಾತ್ರ ತಡೆಹಿಡಿಯಬಹುದು ನಗದೀಕರಣ ಸೌಲಭ್ಯ ತಡೆಹಿಡಿಯುವಂತಿಲ್ಲ ಎಂಬ ಅವರ ವಾದವನ್ನು ಒಪ್ಪಲು ಸಾಧ್ಯವಿಲ್ಲ. ನಿವೃತ್ತಿ ಹೊಂದಿದ ಸರ್ಕಾರಿ ನೌಕರನ ವಿರುದ್ಧ ಇಲಾಖಾ ವಿಚಾರಣೆ/ಕ್ರಿಮಿನಲ್ ಮೊಕದ್ದಮೆಗಳು ಬಾಕಿ ಇರುವ ಸಂದರ್ಭಗಳಲ್ಲಿ ಹಾಗೂ ಅದರ ಫಲಿತಾಂಶದಿಂದಾಗಿ ಅವನಿಂದ ಸರ್ಕಾರಕ್ಕೆ ಉಂಟಾದ ನಷ್ಟವನ್ನು ವಸೂಲು ಮಾಡಬೇಕಾದ ಪ್ರಮೇಯ ಬಂದಲ್ಲಿ ಡಿಸಿಆರ್‌ಜಿ ಕಮ್ಯುಟೇಶನ್ ಹಾಗೂ ನಗದೀಕರಣ ಮೊತ್ತಗಳನ್ನು ತಡೆಹಿಡಿಯಲು ಕೆಸಿಎಸ್‌ಆರ್‌ನಲ್ಲೇ ಅವಕಾಶ ಕಲ್ಪಿಸಲಾಗಿದೆ. ಅದರಂತೆ ಸದರಿ ಸೌಲಭ್ಯಗಳನ್ನು ತಡೆಹಿಡಿಯಲಾಗಿದೆ. ಈ ಎಲ್ಲಾ ಅಂಶಗಳನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಯುಸೇಇ 77 ಯುಇಸೇ 2010, ಬೆಂಗಳೂರು, ದಿನಾಂಕ : 23–12–2010.**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ವಾಸ್ತವಾಂಶಗಳಿಂದಾಗಿ ಶ್ರೀ ವಿ.ಕೆ. ಗುಡೋಡಗಿ, ನಿವೃತ್ತ ಜಂಟಿ ನಿರ್ದೇಶಕರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ ಅವರು ದಿನಾಂಕ : 24–10–2008 ಹಾಗೂ 26–12–2009 ರಂದು ಸಲ್ಲಿಸಿದ ಒಟ್ಟು ಮೂರು ಮನವಿಗಳಲ್ಲಿ ಕೋರಿರುವಂತೆ ಅವರ ನಿವೃತ್ತಿ ಸೌಲಭ್ಯಗಳ ಪೈಕಿ ತಡೆಹಿಡಿಯಲಾದ ರೂ. 2.50 ಲಕ್ಷ (ಎರಡು ಲಕ್ಷದ ಐವತ್ತು ಸಾವಿರ ರೂಪಾಯಿಗಳು) ಗಳನ್ನು ಬಿಡುಗಡೆ ಮಾಡುವ ಅವಶ್ಯಕತೆ ಇಲ್ಲವೆಂದು ಸದರಿ ಮೊತ್ತವನ್ನು ಅವರ ವಿರುದ್ಧ ಪ್ರಸ್ತುತ ಜಾರಿಯಲ್ಲಿರುವ ಎರಡು ಇಲಾಖಾ ವಿಚಾರಣೆಗಳು ಮುಕ್ತಾಯಗೊಳ್ಳುವವರೆಗೂ ತಡೆಹಿಡಿಯಬೇಕೆಂದು ಸರ್ಕಾರವು ಈ ಮೂಲಕ ಆದೇಶಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ.ಎಸ್. ಶಿವರಾಮ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಯುವಜನ ಸೇವಾ ಇಲಾಖೆ.

ಪಿ. ಆರ್. 223

## ಇಂಧನ ಸಚಿವಾಲಯ

**ವಿಷಯ :** ಕರ್ನಾಟಕ ವಿದ್ಯುತ್ ನಿಯಂತ್ರಣ ಆಯೋಗಕ್ಕೆ 2010–11 ರ ಹಣಕಾಸು ವರ್ಷದಲ್ಲಿ ನಾಲ್ಕನೇ ಕಂತಿನ ಸಹಾಯಾನುದಾನ ಬಿಡುಗಡೆ ಕುರಿತು.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ : ಇಎನ್ 12 ಪಿಎಸ್‌ಆರ್ 2010, ದಿನಾಂಕ : 19–4–2010.
2. ಸರ್ಕಾರಿ ಆದೇಶ ಸಂಖ್ಯೆ : ಇಎನ್ 19 ಪಿಎಸ್‌ಆರ್ 2010, ದಿನಾಂಕ : 24–4–2010.
3. ಸರ್ಕಾರಿ ಆದೇಶ ಸಂಖ್ಯೆ : ಇಎನ್ 12 ಪಿಎಸ್‌ಆರ್ 2010, ದಿನಾಂಕ : 26–4–2010.
4. ಸರ್ಕಾರಿ ಆದೇಶ ಸಂಖ್ಯೆ : ಇಎನ್ 19 ಪಿಎಸ್‌ಆರ್ 2010, ದಿನಾಂಕ : 9–8–2010.
5. ಸರ್ಕಾರಿ ಆದೇಶ ಸಂಖ್ಯೆ : ಇಎನ್ 19 ಪಿಎಸ್‌ಆರ್ 2010, ದಿನಾಂಕ : 20–10–2010.

**ಪ್ರಸ್ತಾವನೆ :**

**1.** 2010–11ನೇ ಸಾಲಿನ ಆಯವ್ಯಯ ಸವಿವರ ವೆಚ್ಚದ ಅಂದಾಜುಗಳ ಸಂಪುಟ–7 ರಲ್ಲಿ ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗಕ್ಕೆ ಸಹಾಯಾನುದಾನ ರೂಪದಲ್ಲಿ ರೂ. 213.00 ಲಕ್ಷಗಳ ಅವಕಾಶವನ್ನು ಕಲ್ಪಿಸಲಾಗಿದೆ. ಈ ಸಹಾಯಾನುದಾನವನ್ನು 4 ಕಂತುಗಳಲ್ಲಿ ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗಕ್ಕೆ ಬಿಡುಗಡೆ ಮಾಡಲು ಉದ್ದೇಶಿಸಲಾಗಿದೆ.

**2.** ಮೇಲೆ ಕ್ರಮಾಂಕ–1 ಮತ್ತು 3 ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ, ಕರ್ನಾಟಕ ವಿದ್ಯುತ್ ನಿಯಂತ್ರಣ ಆಯೋಗದ ಸದಸ್ಯರ Panel of names ಆಯ್ಕೆ ಬಗ್ಗೆ ರಚಿಸಿದ ಆಯ್ಕೆ ಸಮಿತಿ ಸದಸ್ಯರ ಪ್ರಯಾಣ ಭತ್ಯೆ ವೆಚ್ಚವನ್ನು ಮರುಪಾವತಿಸುವ ಸಲುವಾಗಿ 1,30,000/– ರೂ. ಮತ್ತು 28,905 ರೂ. ಗಳನ್ನು "2801–80–101–1–07–101 ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗ ಸಹಾಯಾನುದಾನ (ಯೋಜನೇತರ)" ಲೆಕ್ಕಶೀರ್ಷಿಕೆಯಡಿ, ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಗೆ ಬಿಡುಗಡೆ ಮಾಡಲಾಗಿದೆ.

**3.** ಮೇಲೆ ಕ್ರಮಾಂಕ–2 ರಲ್ಲಿ ಓದಲಾದ ಸರ್ಕಾರಿ ಆದೇಶ ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗಕ್ಕೆ 2010–11ರ ಮೊದಲನೆ ತ್ರೈಮಾಸಿಕ ಅವಧಿಗೆ 51,66,095/– ರೂ. ಮತ್ತು ಕ್ರಮಾಂಕ–4 ಮತ್ತು 5 ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ, 2010–11ನೇ ಸಾಲಿಗೆ, ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗದ ಸಿಬ್ಬಂದಿ ಮತ್ತು ಸಾಮಾನ್ಯ ವೆಚ್ಚ ಸಲುವಾಗಿ ಎರಡನೇ ಮತ್ತು ಮೂರನೇ ತ್ರೈಮಾಸಿಕ ಅವಧಿಗೆ ಸಹಾಯಾನುದಾನ ತಲಾ ರೂ. 53,25,000/–ನ್ನು ಕರ್ನಾಟಕ ವಿದ್ಯುತ್ ನಿಯಂತ್ರಣ ಆಯೋಗಕ್ಕೆ ಬಿಡುಗಡೆ ಮಾಡಲಾಗಿರುತ್ತದೆ.

**4.** ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗಕ್ಕೆ 2010–11ನೇ ಸಾಲಿನ ನಾಲ್ಕನೇ ತ್ರೈಮಾಸಿಕ ಅವಧಿಗೆ ಸಹಾಯಾನುದಾನ ರೂ. 53,25,000/– ಬಿಡುಗಡೆ ಮಾಡುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಇಎನ್ 19 ಪಿಎಸ್‌ಆರ್ 2010, ಬೆಂಗಳೂರು, ದಿನಾಂಕ : 14–01–2011.**

ಸರ್ಕಾರವು, 2010–11ನೇ ಹಣಕಾಸು ವರ್ಷದ ನಾಲ್ಕನೇ ತ್ರೈಮಾಸಿಕ ಅವಧಿಗೆ "2801–80–101–1–07–101 (Grant-in-aid) ಸಹಾಯಾನುದಾನ" ಯೋಜನೇತರ ಲೆಕ್ಕ ಶೀರ್ಷಿಕೆಯಡಿ ಸಿಬ್ಬಂದಿ ಮತ್ತು ಸಾಮಾನ್ಯ ವೆಚ್ಚ ಸಲುವಾಗಿ ರೂ. 53,25,000/– (ಐವತ್ಮೂರು ಲಕ್ಷದ ಇಪ್ಪತ್ತೈದು ಸಾವಿರ ರೂ.ಗಳು ಮಾತ್ರ) ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗಕ್ಕೆ ಬಿಡುಗಡೆ ಮಾಡಿದೆ.

ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗವು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಇಂಧನ ಇಲಾಖೆಯ ಇವರ ಮೇಲು ರುಜುವನ್ನು "Payees Receipt" ನಲ್ಲಿ ಪಡೆದು ಹಣವನ್ನು ಪಡೆಯತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 21 ಟಿಎಫ್‌ಪಿ 2006, ದಿನಾಂಕ : 2–9–2006, ಎಫ್‌ಡಿ 1 ಟಿಎಫ್‌ಪಿ 2008 ದಿನಾಂಕ 16–5–2008, ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ : 20–4–2010 ಮತ್ತು ಎಫ್‌ಡಿ 7 ಟಿಎಫ್‌ಪಿ 2010 ದಿನಾಂಕ 18–11–2010 ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಆರ್ಥಿಕ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

ಪಿ. ಆರ್. 224

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀಮತಿ ಪಾರ್ವತಮ್ಮ, ಮಹಿಳಾ ಪಿಎಸ್ಐ (ಸಿವಿಲ್) ರವರ ಖಾಯಂಪೂರ್ವ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ :** ಡಿಜಿ ಮತ್ತು ಐಜಿಪಿ ರವರ ಪತ್ರ ಸಂಖ್ಯೆ : 58/ಸಿಬ್ಬಂದಿ–1/2010–11, ದಿನಾಂಕ : 8–11–2010.

**ಪ್ರಸ್ತಾವನೆ :**

ಶ್ರೀಮತಿ ಪಾರ್ವತಮ್ಮ, ಮಹಿಳಾ ಪಿ.ಎಸ್.ಐ (ಸಿವಿಲ್) ರವರು ದಿನಾಂಕ : 1–9–2005 ರಂದು ಸೇವೆಗೆ ಸೇರಿದ್ದು, ಇವರ 2 1/2 ವರ್ಷಗಳ ಖಾಯಂಪೂರ್ವ ಅವಧಿಯು ದಿನಾಂಕ : 1–3–2008 ಕ್ಕೆ ಪೂರ್ಣಗೊಳ್ಳುತ್ತದೆ. ಆದರೆ, ಸದರಿಯವರು ಕೆ.ಪಿ.ಎ. ಮೈಸೂರು ರವರು ನಡೆಸಿದ ಅನುಪೂರಕ ಪರೀಕ್ಷೆ ದಿನಾಂಕ 6–7–2009 ರಿಂದ 13–7–2009 ರಲ್ಲಿ ರಿವಾಲ್ವರ್ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರುವುದರಿಂದ, ಕೆ.ಸಿ.ಎಸ್. (ಪ್ರೊಬೇಷನ್) ನಿಯಮಗಳು, 1977ರ ನಿಯಮ 4(1)(ii) ರನ್ವಯ ನೇಮಕಾತಿ ಪ್ರಾಧಿಕಾರಕ್ಕೆ ಒಳಪಟ್ಟಂತೆ ಸದರಿಯವರ ಖಾಯಂಪೂರ್ವ ಅವಧಿಯನ್ನು ದಿನಾಂಕ : 1–3–2008 ರಿಂದ 1–6–2009 ರವರೆಗೆ ಒಂದು ವರ್ಷ 3 ತಿಂಗಳವರೆಗೆ ಖಾಯಂಪೂರ್ವ ಅವಧಿಯನ್ನು ವಿಸ್ತರಿಸಿರುತ್ತಾರೆ.

ಇವರ ವಿರುದ್ಧ ಚಾಲ್ತಿ ಶಿಕ್ಷೆ/ಕ್ರಿಮಿನಲ್ ಮೊಕದ್ದಮೆ/ಇಲಾಖಾ ವಿಚಾರಣೆ ಬಾಕಿ ಇರುವುದಿಲ್ಲ ಹಾಗೂ ಕೆ.ಸಿ.ಎಸ್. (ಪ್ರೊಬೇಷನ್) ನಿಯಮಗಳು, 1977ರ ನಿಯಮ 4 ಮತ್ತು 5(1)ರನ್ವಯ ಇವರು ಹೊಂದಿರುವ ಹುದ್ದೆಯ ಕಾರ್ಯಭಾರ ನಿರ್ವಹಿಸಲು ಸಮರ್ಥರಿರುವುದಾಗಿ ಹಾಗೂ ಸದರಿಯವರು ದಿನಾಂಕ : 6–7–2009 ರಿಂದ 13–7–2009 ರಲ್ಲಿ ನಡೆದ ರಿವಾಲ್ವರ್ ಅನುಪೂರಕ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರುವುದರಿಂದ ಇವರ ಖಾಯಂಪೂರ್ವ ಅವಧಿಯನ್ನು ದಿನಾಂಕ : 2–6–2009 ರಿಂದ 13–7–2009 ರವರೆಗೆ ಕೆ.ಸಿ.ಎಸ್. (ಪ್ರೊಬೇಷನ್) ನಿಯಮಗಳು, 1977ರ ನಿಯಮ 4(1)(i) ರನ್ವಯ ವಿಸ್ತರಿಸುವಂತೆ ಡಿಜಿ ಮತ್ತು ಐಜಿಪಿ ರವರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 379 ಪೊಸಇ 2010, ಬೆಂಗಳೂರು, ದಿನಾಂಕ : 11–01–2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ಪ್ರೊಬೇಷನರಿ) ನಿಯಮಾವಳಿಗಳು, 1977ರ ನಿಯಮ 4(1) (i) ರನ್ವಯ ಶ್ರೀಮತಿ ಪಾರ್ವತಮ್ಮ, ಮಹಿಳಾ ಪಿ.ಎಸ್.ಐ (ಸಿವಿಲ್) ರವರ ಖಾಯಂ ಪೂರ್ವ ಅವಧಿಯನ್ನು ದಿನಾಂಕ : 2–6–2009 ರಿಂದ 13–7–2009 ರವರೆಗೆ ವಿಸ್ತರಿಸಿ ಸರ್ಕಾರವು ಆದೇಶಿಸಿದೆ.

ವಿಸ್ತರಿಸಿದ ಪರಿವೀಕ್ಷಣಾ ಅವಧಿಗೆ ಕ.ನಾ.ಸೇ (ಪರಿವೀಕ್ಷಣೆ) ನಿಯಮಗಳು 1977ರ ನಿಯಮ 10ರ ಪ್ರಕಾರ ವಾರ್ಷಿಕ ವೇತನ ಬಡ್ತಿಗಳನ್ನು ನೀಡುವಂತಿಲ್ಲ. ಕಾಲ್ಪನಿಕವಾಗಿ ವಾರ್ಷಿಕ ವೇತನ ಬಡ್ತಿಗಳನ್ನು ಬಿಡುಗಡೆ ಮಾಡಿ ವೇತನವನ್ನು ನಿಗದಿಪಡಿಸುವುದು. ಹೀಗೆ ನಿಗದಿಪಡಿಸಿದ ವೇತನದ ಬಾಕಿಯನ್ನು ನೀಡಲು ಅವಕಾಶವಿರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ. (ಪೊಲೀಸ್ ಸೇವೆಗಳು)

ಪಿ. ಆರ್. 225

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಬಸವರಾಜು, ಕಾರ್ಯದರ್ಶಿ, ಕಡಕೊಳ ಗ್ರಾಮ ಪಂಚಾಯಿತಿ, ಮೈಸೂರು ತಾಲ್ಲೂಕು (ಪ್ರಸ್ತುತ ನಿವೃತ್ತ) ಇವರ ವಿರುದ್ಧದ ಶಿಸ್ತು ಪ್ರಕರಣದ ಬಗ್ಗೆ–ಆದೇಶ.

**ಓದಲಾಗಿದೆ :** ಮೈಸೂರು ಜಿಲ್ಲಾಧಿಕಾರಿಗಳ ಪತ್ರ ಸಂಖ್ಯೆ : ಇಎಸ್‌ಟಿ(2) ಸಿಆಋು/52/2010–11, ದಿನಾಂಕ : 25–8–2010.

**ಪ್ರಸ್ತಾವನೆ :**

ಮೇಲೆ ಓದಲಾದ ಮೈಸೂರು ಜಿಲ್ಲಾಧಿಕಾರಿಗಳ ದಿನಾಂಕ : 25–8–2010ರ ಪತ್ರದಲ್ಲಿ ಶ್ರೀ ಬಸವರಾಜು, ಕಾರ್ಯದರ್ಶಿ, ಕಡಕೊಳ ಗ್ರಾಮ ಪಂಚಾಯಿತಿ, ಮೈಸೂರು ತಾಲ್ಲೂಕು (ಪ್ರಸ್ತುತ ನಿವೃತ್ತ) ಇವರು ಈ ಹಿಂದೆ ಸಿಂಧುವಳ್ಳಿ ಗ್ರಾಮ ಪಂಚಾಯಿತಿ ಪ್ರಭಾರ ಕಾರ್ಯದರ್ಶಿಯಾಗಿ ಕಾರ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಶ್ರೀಮತಿ ದೇವಿರಮ್ಮ ಇವರಿಗೆ ಸೇರಿದ ಮನೆ ನಂ. 45 ರ ಪೌತಿ ಖಾತೆಯನ್ನು ಶ್ರೀಮತಿ ಚಿನ್ನತಾಯಮ್ಮ ರವರ ಹೆಸರಿಗೆ ಬದಲಾವಣೆ ಮಾಡುವ ಸಂಬಂಧ ರೂ. 500/– ಗಳ ಅಕ್ರಮ ಸಂಭಾವನೆಯನ್ನು ನೀಡುವಂತೆ ಒತ್ತಾಯಿಸಿದ್ದರ ಮೇರೆಗೆ ಶ್ರೀಮತಿ ಚಿನ್ನತಾಯಮ್ಮ ರವರ ಮಗ ಶ್ರೀ ಬಿ. ವೃಷಬೇಂದ್ರಪ್ಪ ಇವರಿಂದ ಲಂಚದ ಹಣ ಸ್ವೀಕರಿಸುತ್ತಿದ್ದಾಗ ಲೋಕಾಯುಕ್ತರ ಬಲೆಗೆ ಸಿಕ್ಕಿರುತ್ತಾರೆ.

ಶ್ರೀ ಬಸವರಾಜು, ಕಾರ್ಯದರ್ಶಿ, ಇವರ ವಿರುದ್ಧ ಲೋಕಾಯುಕ್ತ ಜಿಲ್ಲಾ ಘನ ನ್ಯಾಯಾಲಯದಲ್ಲಿ ಪ್ರಕರಣ ದಾಖಲಿಸಲಾಗಿ, ನ್ಯಾಯಾಲಯ ದಿನಾಂಕ : 13–1–2010 ರಲ್ಲಿ ನಿವೃತ್ತ ನೌಕರರನ್ನು ತಪ್ಪಿತಸ್ಥರೆಂದು ತೀರ್ಮಾನಿಸಿ ಆದೇಶಿಸಿರುವುದು ಆಗಿರುತ್ತದೆ. ಅದರಂತೆ ಶ್ರೀ ಬಸವರಾಜು, ಹಿಂದಿನ ಕಾರ್ಯದರ್ಶಿ, ಕಡಕೊಳ ಗ್ರಾಮ ಪಂಚಾಯಿತಿ ಇವರ ವಿರುದ್ಧ ಲಂಚ ನಿರೋಧಕ ಕಾಯ್ದೆ 1988 ರ ಕಲಂ 7 ರ ಪ್ರಕಾರ ಆರೋಪಗಳು ಸಾಬೀತಾದ ಹಿನ್ನೆಲೆಯಲ್ಲಿ ಎರಡು ವರ್ಷಗಳ ಸಾದಾ ಸೆರೆವಾಸ ಶಿಕ್ಷೆ ಹಾಗೂ ರೂ. 2000/– ಗಳ ದಂಡ, ದಂಡ ಕಟ್ಟಲು ತಪ್ಪಿದಲ್ಲಿ ಪುನಃ ಆರು ತಿಂಗಳ ಸಾದಾ ಸೆರೆವಾಸ ಶಿಕ್ಷೆ ವಿಧಿಸಿ, ಮಾನ್ಯ ವಿಶೇಷ ನ್ಯಾಯಾಲಯವು ಆದೇಶಿಸಿದೆ.

ಮುಂದುವರೆದು, ನ್ಯಾಯಾಲಯದ ತೀರ್ಮಾನವನ್ನು ಅನುಸರಿಸಿ ಅಪರ ಪೋಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರು ದಿನಾಂಕ : 31–3–2010ರ ಪತ್ರದಲ್ಲಿ ಶ್ರೀ ಬಸವರಾಜು ಇವರಿಗೆ ನ್ಯಾಯಾಲಯವು ಶಿಕ್ಷೆ ವಿಧಿಸಿರುವುದರಿಂದ ನಿಯಮಾನುಸಾರ ದೊರೆಯುವಂತಹ ನಿವೃತ್ತಿ ವೇತನ ಮತ್ತು ಇತರೆ ಸೌಲಭ್ಯಗಳನ್ನು ತಡೆ ಹಿಡಿಯಲು ಕೋರಿರುವುದರಿಂದ, ನ್ಯಾಯಾಲಯವು ನಿವೃತ್ತ ನೌಕರರಿಗೆ ಸೆರೆವಾಸ ಶಿಕ್ಷೆ ವಿಧಿಸಿರುವುದರಿಂದ, ಕರ್ನಾಟಕ ಸರ್ಕಾರಿ ಸೇವಾ ನಿಯಮಾವಳಿಗಳು 1957ರ ನಿಯಮ 214(1) (ಎ) ಪ್ರಕಾರ ಶ್ರೀ ಬಸವರಾಜು, ನಿವೃತ್ತ ಕಾರ್ಯದರ್ಶಿಯವರಿಗೆ ದೊರೆಯುವಂತಹ ನಿವೃತ್ತಿ ವೇತನ ಮತ್ತು ಇತರೆ ಸೌಲಭ್ಯಗಳನ್ನು ತಡೆಹಿಡಿದು ಜಿಲ್ಲಾಧಿಕಾರಿಗಳು ತಮ್ಮ ದಿನಾಂಕ : 22–7–2010 ರ ಆದೇಶದಲ್ಲಿ ಆದೇಶಿಸಲಾಗಿದೆ.

ಶ್ರೀ ಬಸವರಾಜು, ನಿವೃತ್ತ ಕಾರ್ಯದರ್ಶಿ ರವರು ದಿನಾಂಕ : 16-8-2010 ರಂದು ಮನವಿ ಸಲ್ಲಿಸಿ ಮಾನ್ಯ ಉಚ್ಚ ನ್ಯಾಯಾಲಯವು ದಿನಾಂಕ 5-2-2010 ರಂದು ಶಿಕ್ಷೆ ವಿಧಸಿರುವುದನ್ನು ಅಮಾನತ್ತು ಮಾಡಿರುವುದಾಗಿ ತಿಳಿಸಿ ಸ್ಥಗಿತಗೊಂಡಿರುವ ನಿವೃತ್ತಿ ವೇತನವನ್ನು ಮಂಜೂರು ಮಾಡುವಂತೆ ಕೋರಿರುತ್ತಾರೆ. ಶ್ರೀ ಬಸವರಾಜು, ನಿವೃತ್ತ ಕಾರ್ಯದರ್ಶಿಯವರು ಜಿಲ್ಲಾ ಸತ್ರ ನ್ಯಾಯಾಧೀಶರ ವಿಶೇಷ ಸಂಖ್ಯೆ : 101/2002, ದಿನಾಂಕ 13-1-2010 ರ ಆದೇಶದಲ್ಲಿ ಶಿಕ್ಷೆ ವಿಧಿಸಿರುವ ಬಗ್ಗೆ ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ಮೇಲ್ಮನವಿ ಸಲ್ಲಿಸಿದ್ದು, ಮಾನ್ಯ ಉಚ್ಚ ನ್ಯಾಯಾಲಯವು ದಿನಾಂಕ : 5-2-2010ರ ಆದೇಶದಲ್ಲಿ ವಿಶೇಷ ಜಿಲ್ಲಾ ನ್ಯಾಯಾಲಯವು ವಿಧಿಸಿರುವ ಶಿಕ್ಷೆಯನ್ನು ಅಮಾನತ್ತು ಮಾಡಿರುತ್ತಾರೆ.

ಕರ್ನಾಟಕ ಸರ್ಕಾರಿ ಸೇವಾ ನಿಯಮಾವಳಿಗಳು 1957ರ ನಿಯಮ 214(1)(ಎ) ಪ್ರಕಾರ ನಿವೃತ್ತ ನೌಕರರ ವೇತನ ಮತ್ತು ಇತರೆ ಭತ್ಯೆಗಳನ್ನು ತಡೆಯುವ ಅಧಿಕಾರ ಸರ್ಕಾರಕ್ಕೆ ಪ್ರದತ್ತವಾಗಿರುವುದರಿಂದ ಈ ಪ್ರಕರಣದಲ್ಲಿ ಸರ್ಕಾರದಿಂದ ಆದೇಶ ಹೊರಡಿಸುವಂತೆ ಮೈಸೂರು ಜಿಲ್ಲಾಧಿಕಾರಿಗಳು ಪ್ರಸ್ತಾವನೆಯನ್ನು ಸರ್ಕಾರಕ್ಕೆ ಆದೇಶ ಕೋರಿ ಸಲ್ಲಿಸಿರುತ್ತಾರೆ.

ಸರ್ಕಾರದ ಸುತ್ತೋಲೆ ಸಂಖ್ಯೆ : ಸಿಆಸುಇ 9 ಸೇಇವಿ 95 ದಿನಾಂಕ : 26-6-1996 ರಲ್ಲಿ ಆಪಾದಿತ ಸರ್ಕಾರಿ ನೌಕರನು ಕ್ರಿಮಿನಲ್ ನ್ಯಾಯಾಲಯದ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸಿದ್ದಾರೆ ಅಥವಾ ಇತರೆ ವ್ಯವಹರಣೆ ಹೂಡಿದ್ದಾನೆ ಅಥವಾ ಮೇಲಿನ ನ್ಯಾಯಾಲಯವು ಕ್ರಿಮಿನಲ್ ನ್ಯಾಯಾಲಯದ ದಂಡನೆ ಆದೇಶವನ್ನು ನಿಲಂಬನೆಯಲ್ಲಿಟ್ಟಿದೆ ಅಥವಾ ಆತನ ಮೇಲ್ಮನವಿ ಇತ್ಯರ್ಥದಲ್ಲಿರುವಾಗ ಜಾಮೀನಿನ ಮೇಲೆ ಬಿಡುಗಡೆ ಪಡೆದಿದ್ದಾರೆ ಎಂಬ ಕಾರಣಕ್ಕಾಗಿ ಸಿಸಿಎ ನಿಯಮ 14(1)ರ ಅನುಸಾರ ಕ್ರಮ ಜರುಗಿಸುವುದನ್ನು ತಡೆಹಿಡಿಯಬೇಕಾದ ಅಗತ್ಯವಿಲ್ಲ ಹಾಗೂ ಅವರು ಸಲ್ಲಿಸಿದ ಮೇಲ್ಮನವಿ ಇತ್ಯರ್ಥವಾಗುವವರೆಗೆ ಕಾಯದೇ ಶಿಸ್ತು ಕ್ರಮವನ್ನು ಕೈಗೊಳ್ಳತಕ್ಕದೆಂದು ಸೂಚಿಸಲಾಗಿದೆ. ಪ್ರಸ್ತುತ ಪ್ರಕರಣದಲ್ಲಿ, ಕೆಳಗಿನ ನ್ಯಾಯಾಲಯವು ವಿಧಿಸಿದ ಶಿಕ್ಷೆಯನ್ನು ಉಚ್ಚ ನ್ಯಾಯಾಲಯವು ಅಮಾನತ್ತಿನಲ್ಲಿ ಇಟ್ಟಿರುವುದರಿಂದ ಅವರಿಗೆ ಲೋಕಾಯುಕ್ತರು ಶಿಫಾರಸ್ಸು ಮಾಡಿದ ದಂಡನೆಯನ್ನು ತಡೆಹಿಡಿಯಲು ಸಾಧ್ಯವಾಗುವುದಿಲ್ಲ. ಕೆ.ಸಿ.ಎಸ್.ಆರ್. ನಿಮಯ 214 ರಡಿಯಲ್ಲಿ ನಿವೃತ್ತಿ ವೇತನ ತಡೆಹಿಡಿಯುವ ಅಧಿಕಾರವು ಸರ್ಕಾರಕ್ಕೆ ಮಾತ್ರ ಇದ್ದು, ಮೈಸೂರು ಜಿಲ್ಲಾಧಿಕಾರಿಗಳು ಶ್ರೀ ಬಸವರಾಜು ಇವರ ನಿವೃತ್ತಿ ವೇತನವನ್ನು ತಡೆಹಿಡಿಯುವುದು ನಿಯಮಾನುಸಾರ ಇರುವುದಿಲ್ಲವಾದ್ದರಿಂದ ಸದರಿ ಆದೇಶವನ್ನು ಸಿಸಿಎ ನಿಯಮ 26 ರಡಿಯಲ್ಲಿ ಪುನರಾವಲೋಕಿಸಿ, ಶ್ರೀ ಬಸವರಾಜು, ಕಾರ್ಯದರ್ಶಿ, ಕಡಕೊಳ ಗ್ರಾಮ ಪಂಚಾಯಿತಿ, ಮೈಸೂರು ತಾಲ್ಲೂಕು (ಪ್ರಸ್ತುತ ನಿವೃತ್ತ) ಇವರ ನಿವೃತ್ತಿ ಪೂರ್ತಿ ವೇತನವನ್ನು ತಡೆಹಿಡಿಯಲು ಸರ್ಕಾರವು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 43 ಬಿಡಿಪಿ 2010, ಬೆಂಗಳೂರು, ದಿನಾಂಕ : 30-12-2010.**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214 ರಡಿಯಲ್ಲಿ ಶ್ರೀ ಬಸವರಾಜು, ಕಾರ್ಯದರ್ಶಿ, ಕಡಕೊಳ ಗ್ರಾಮ ಪಂಚಾಯಿತಿ, ಮೈಸೂರು ತಾಲ್ಲೂಕು (ಪ್ರಸ್ತುತ ನಿವೃತ್ತ) ರವರ ಪೂರ್ಣ ನಿವೃತ್ತಿ ವೇತನವನ್ನು ತಡೆಹಿಡಿದು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ. ಗಂಗಾಧರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ. ಆರ್. 226 ಕಂದಾಯ ಇಲಾಖೆ (ವಿ.ನಿ ಮತ್ತು ಸೇ-2).

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಅಜೇಯ ಸಾರಥಿ, ಪಿ.ಎಸ್.ಐ. (ಸಿವಿಲ್), ಹೆಣ್ಣೂರು ಪೊಲೀಸ್ ಠಾಣೆ, ಬೆಂಗಳೂರು ನಗರ ಇವರ ಖಾಯಂಪೂರ್ವ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ :** ಡಿಜಿ ಮತ್ತು ಐಜಿಪಿ ರವರ ಪತ್ರ ಸಂಖ್ಯೆ : 16/ಸಿಬ್ಬಂದಿ-1/2010-11 ದಿನಾಂಕ : 08-11-2010.

**ಪ್ರಸ್ತಾವನೆ:**

ಶ್ರೀ ಅಜೇಯ ಸಾರಥಿ, ಪಿ.ಎಸ್.ಐ. (ಸಿವಿಲ್), ಹೆಣ್ಣೂರು ಪೊಲೀಸ್ ಠಾಣೆ, ಬೆಂಗಳೂರು ನಗರ ರವರು ದಿನಾಂಕ : 01-09-2005 ರಂದು ಸೇವೆಗೆ ಸೇರಿದ್ದು, ಇವರ 2 1/2 ವರ್ಷಗಳ ಖಾಯಂಪೂರ್ವ ಅವಧಿಯು ದಿನಾಂಕ : 01-03-2008 ಕ್ಕೆ ಪೂರ್ಣಗೊಳ್ಳುತ್ತದೆ. ಆದರೆ, ಸದರಿಯವರು ಕನ್ನಡ ಭಾಷಾ ಪರೀಕ್ಷೆಯಲ್ಲಿ ಉತ್ತೀರ್ಣರಾಗಿಲ್ಲದ ಕಾರಣ ಕೆ.ಸಿ.ಎಸ್. (ಪ್ರೊಬೇಷನ್) ನಿಯಮಗಳು, 1977ರ ನಿಯಮ 4(1)(ii) ರನ್ವಯ ನೇಮಕಾತಿ ಪ್ರಾಧಿಕಾರವು ಸದರಿಯವರ ಖಾಯಂಪೂರ್ವ ಅವಧಿಯನ್ನು ದಿನಾಂಕ : 01-03-2008 ರಿಂದ 01-06-2009 ರವರೆಗೆ ಒಂದು ವರ್ಷ 3 ತಿಂಗಳ ವರೆಗೆ ಖಾಯಂಪೂರ್ವ ಅವಧಿಯನ್ನು ವಿಸ್ತರಿಸಿರುತ್ತದೆ.

ಸದರಿ ಅಧಿಕಾರಿಯ ವಿರುದ್ಧ ಚಾಲ್ತಿ ಶಿಕ್ಷೆ/ಕ್ರಿಮಿನಲ್ ಮೊಕದ್ದಮೆ/ಇಲಾಖಾ ವಿಚಾರಣೆ ಬಾಕಿ ಇರುವುದಿಲ್ಲ ಹಾಗೂ ಕೆ.ಸಿ.ಎಸ್. (ಪ್ರೊಬೇಷನ್) ನಿಯಮಗಳು, 1977ರ ನಿಯಮ 4 ಮತ್ತು 5(1) ರನ್ವಯ ಅವರು ಹೊಂದಿರುವ ಹುದ್ದೆಯ ಕಾರ್ಯಭಾರ ನಿರ್ವಹಿಸಲು ಸಮರ್ಥರಿರುವುದಾಗಿ ಹಾಗೂ ಸದರಿಯವರು ಕನ್ನಡ ಭಾಷಾ ಪರೀಕ್ಷೆಯಲ್ಲಿ ದಿನಾಂಕ : 04-11-2009 ರಂದು ಉತ್ತೀರ್ಣರಾಗಿರುವುದರಿಂದ ಅವರ ಖಾಯಂಪೂರ್ವ ಅವಧಿಯನ್ನು ದಿನಾಂಕ 02-06-2009 ರಿಂದ 03-11-2009 ರವರೆಗೆ ಕೆ.ಸಿ.ಎಸ್. (ಪ್ರೊಬೇಷನ್) ನಿಯಮಗಳು, 1977ರ 4(1)(ii) ರನ್ವಯ ವಿಸ್ತರಿಸುವಂತೆ ಮೇಲೆ ಓದಲಾದ ಪತ್ರದಲ್ಲಿ ಡಿಜಿ ಮತ್ತು ಐಜಿಪಿ ರವರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 380 ಪೊಸಇ 2010, ಬೆಂಗಳೂರು, ದಿನಾಂಕ: 11-01-2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಾವಳಿಗಳು, 1977ರ ನಿಯಮ 4(1)(i) ರನ್ವಯ ಶ್ರೀ ಅಜೇಯ ಸಾರಥಿ, ಪಿ.ಎಸ್.ಐ. (ಸಿವಿಲ್), ಹೆಣ್ಣೂರು ಪೊಲೀಸ್ ಠಾಣೆ, ಬೆಂಗಳೂರು ನಗರ ರವರ ಖಾಯಂ ಪೂರ್ವ ಅವಧಿಯನ್ನು ದಿನಾಂಕ : 02-06-2009 ರಿಂದ 03-11-2009 ರವರೆಗೆ ವಿಸ್ತರಿಸಿ ಸರ್ಕಾರವು ಆದೇಶಿಸಿದೆ.

ವಿಸ್ತರಿಸಿದ ಪರಿವೀಕ್ಷಣಾ ಅವಧಿಗೆ ಕ.ನಾ.ಸೇ (ಪರಿವೀಕ್ಷಣಾ) ನಿಯಮಗಳು 1977ರ ನಿಯಮ 10ರ ಪ್ರಕಾರ ವಾರ್ಷಿಕ ವೇತನ ಬಡ್ತಿಗಳನ್ನು ನೀಡುವಂತಿಲ್ಲ. ಕಾಲ್ಪನಿಕವಾಗಿ ವಾರ್ಷಿಕ ವೇತನ ಬಡ್ತಿಗಳನ್ನು ಬಿಡುಗಡೆ ಮಾಡಿ ವೇತನವನ್ನು ನಿಗದಿಪಡಿಸುವುದು. ಹೀಗೆ ನಿಗದಿಪಡಿಸಿದ ವೇತನದ ಬಾಕಿಯನ್ನು ನೀಡಲು ಅವಕಾಶವಿರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 228

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಬಿ.ಎಸ್.ವಾಜಂತ್ರಿ, ಸರ್ಕಾರಿ ಅಭಿಯೋಜಕರು, ತ್ವರಿತ ಗತಿ ನ್ಯಾಯಾಲಯ, ಜಮಖಂಡಿ (ಹಿಂದಿನ ಸರ್ಕಾರಿ ಅಭಿಯೋಜಕರು, ಬಾಗಲಕೋಟೆ) ಇವರು ದಿನಾಂಕ : 04–08–2009 ರಿಂದ 29–10–2009ರವರೆಗೆ ಕಳೆದ ಅವಧಿಯನ್ನು ಕಡ್ಡಾಯ ನಿರೀಕ್ಷಣಾವಧಿ ಎಂದು ಪರಿಗಣಿಸುವ ಕುರಿತು.

**ಓದಲಾಗಿದೆ :**

1. ಸರ್ಕಾರದ ಪತ್ರದ ಸಂ.ಲಾ 139 ಎಲ್‌ಸಿಇ 2009, ದಿನಾಂಕ : 09–07–2009.
2. ಸರ್ಕಾರದ ಅಧಿಸೂಚನೆ ಸಂ : ಒಇ 288 ಪಿಪಿಇ 2009, ದಿನಾಂಕ : 16–10–2009.
3. ಸರ್ಕಾರದ ಆದೇಶ ಸಂ : ಒಇ 377 ಪಿಪಿಇ 2009, ದಿನಾಂಕ : 22–10–2009.
4. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರುರವರ ಪತ್ರದ ಸಂ : ಡಿಪಿಎನ್/ಸಿಶಾ–1/192/2009–10, ದಿನಾಂಕ : 24–05–2010.

**ಪ್ರಸ್ತಾವನೆ:**

ಮೇಲೆ (4)ರಲ್ಲಿ ಓದಲಾದ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರುರವರ ದಿನಾಂಕ : 24–05–2010ರ ಪತ್ರದಲ್ಲಿ ಶ್ರೀ ಬಿ.ಎಸ್.ವಾಜಂತ್ರಿ, ಸರ್ಕಾರಿ ಅಭಿಯೋಜಕರು, ತ್ವರಿತ ಗತಿ ನ್ಯಾಯಾಲಯ, ಜಮಖಂಡಿ, ಇವರು ಈ ಹಿಂದೆ ಬಾಗಲಕೋಟೆಯ 2ನೇ ತ್ವರಿತಗತಿ ನ್ಯಾಯಾಲಯದ ಸರ್ಕಾರಿ ಅಭಿಯೋಜಕರ ಹುದ್ದೆಯನ್ನು ನಿರ್ವಹಿಸುತ್ತಿದ್ದ ಅವಧಿಯಲ್ಲಿ ಮೇಲೆ (1)ರಲ್ಲಿ ಓದಲಾದ ದಿನಾಂಕ : 09–07–2009ರ ಸರ್ಕಾರದ ಪತ್ರದನ್ವಯ ಸ್ಥಳಾಂತರಗೊಳಿಸಲಾದ 29 ತ್ವರಿತಗತಿ ನ್ಯಾಯಾಲಯಗಳಲ್ಲಿ ಬಾಗಲಕೋಟೆಯ 2ನೇ ತ್ವರಿತಗತಿ ನ್ಯಾಯಾಲಯವು ದೇವನಹಳ್ಳಿಗೆ ಸ್ಥಳಾಂತರಗೊಂಡಿದ್ದು, ಆಡಳಿತಾತ್ಮಕ ಕಾರಣಗಳಿಂದಾಗಿ ಸರ್ಕಾರಿ ಅಭಿಯೋಜಕರ ಹುದ್ದೆಯು ಸ್ಥಳಾಂತರವಾಗದಿದ್ದ ಕಾರಣ, ದಿನಾಂಕ : 04–08–2009 ರಿಂದ 29–10–2009 ರವರೆಗೆ ಮೂಲ ಹುದ್ದೆಯಲ್ಲಿ ಕಾರ್ಯ ನಿರ್ವಹಿಸಲು ಅನಿವಾರ್ಯವಾಗಿ ಸಾಧ್ಯವಾಗಿರುವುದಿಲ್ಲ. ಆದರೆ, ಇದೇ ಅವಧಿಯಲ್ಲಿ ಅವರನ್ನು ಹೆಚ್ಚಿನ ಪ್ರಭಾರದಲ್ಲಿರಿಸಲಾಗಿದ್ದ ಜಮಖಂಡಿಯ ತ್ವರಿತ ಗತಿ ನ್ಯಾಯಾಲಯದ ಸರ್ಕಾರಿ ಅಭಿಯೋಜಕರ ಹುದ್ದೆಯಲ್ಲಿ ಕಾರ್ಯನಿರ್ವಹಿಸಿರುತ್ತಾರೆ. ಮೇಲೆ (3)ರಲ್ಲಿ ಓದಲಾದ ದಿನಾಂಕ : 22–10–2009ರ ಸರ್ಕಾರದ ಆದೇಶದನ್ವಯ ಬಾಗಲಕೋಟೆಯ ಸರ್ಕಾರಿ ಅಭಿಯೋಜಕರ ಹುದ್ದೆಯನ್ನು ಸಹ ದೇವನಹಳ್ಳಿಗೆ ಸ್ಥಳಾಂತರಿಸಲಾಗಿದೆ.

ಮೇಲೆ (2)ರಲ್ಲಿ ಓದಲಾದ ದಿನಾಂಕ : 16–10–2009 ಸರ್ಕಾರದ ಅಧಿಸೂಚನೆಯನ್ವಯ, ಶ್ರೀ ಬಿ.ಎಸ್.ವಾಜಂತ್ರಿರವರು 1ನೇ ತ್ವರಿತ ವಿಲೇವಾರಿ ನ್ಯಾಯಾಲಯ, ಜಮಖಂಡಿಯ ಸರ್ಕಾರಿ ಅಭಿಯೋಜಕರ ಹುದ್ದೆಗೆ ವರ್ಗಾವಣೆಗೊಂಡು, ದಿನಾಂಕ : 24–10–2009ರ ಇಲಾಖೆಯ ಚಲನಾದೇಶದನ್ವಯ ದಿನಾಂಕ : 29–10–2009ರ ಅಪರಾಹ್ನ ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುತ್ತಾರೆ. ಆದ್ದರಿಂದ, ಶ್ರೀ ಬಿ.ಎಸ್.ವಾಜಂತ್ರಿರವರು ಅನಿವಾರ್ಯವಾಗಿ ಸ್ಥಳ ನಿಯುಕ್ತಿಗಾಗಿ ಅಲ್ಲದಿದ್ದರೂ, ಆಡಳಿತಾತ್ಮಕ ಕಾರಣಗಳಿಂದಾಗಿ ಹುದ್ದೆಯು ಸ್ಥಳಾಂತರವಾಗದಿದ್ದರಿಂದ ದಿನಾಂಕ: 04–08–2009 ರಿಂದ 29–10–2009 ರವರೆಗೆ ಮೂಲ ಹುದ್ದೆಯ ಕರ್ತವ್ಯವನ್ನು ನಿರ್ವಹಿಸಲಾಗದೇ ಕಳೆದ ಅವಧಿಯನ್ನು, ಇದೊಂದು ವಿಶೇಷ ಪ್ರಕರಣವೆಂದು ಪರಿಗಣಿಸಿ ಕರ್ನಾಟಕ ನಾಗರೀಕಾ ಸೇವಾ ನಿಯಮಗಳು, 1958ರ ನಿಯಮ 8(15)(ಎಫ್) ರನ್ವಯ ಕಡ್ಡಾಯ ನಿರೀಕ್ಷಣಾವಧಿಯೆಂದು ಪರಿಗಣಿಸಿ ಆದೇಶವನ್ನು ಹೊರಡಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 186 ಪಿಪಿಇ 2010, ಬೆಂಗಳೂರು, ದಿನಾಂಕ: 13–01–2011.**

ಮೇಲೆ ವಿವರಿಸಿರುವ ಹಿನ್ನೆಲೆಯಲ್ಲಿ, ಶ್ರೀ ಬಿ.ಎಸ್.ವಾಜಂತ್ರಿ, ಸರ್ಕಾರಿ ಅಭಿಯೋಜಕರು, ತ್ವರಿತ ಗತಿ ನ್ಯಾಯಾಲಯ, ಜಮಖಂಡಿ ಇವರು ಈ ಹಿಂದೆ ಬಾಗಲಕೋಟೆಯ 2ನೇ ತ್ವರಿತಗತಿ ನ್ಯಾಯಾಲಯದ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಸದರಿ ನ್ಯಾಯಾಲಯ ಸ್ಥಳಾಂತರಗೊಂಡು ಹುದ್ದೆಯು ಆಡಳಿತಾತ್ಮಕ ಕಾರಣಗಳಿಂದಾಗಿ ಸ್ಥಳಾಂತರಗೊಳ್ಳದಿದ್ದರಿಂದ ಅನಿವಾರ್ಯವಾಗಿ ಹುದ್ದೆಯ ಕರ್ತವ್ಯವನ್ನು ನಿರ್ವಹಿಸಲಾಗದೇ ಕಳೆದ ದಿನಾಂಕ : 04–08–2009 ರಿಂದ 29–10–2009ರ ವರೆಗಿನ ಅವಧಿಯನ್ನು, ಇದೊಂದು ವಿಶೇಷ ಪ್ರಕರಣವೆಂದು ಪರಿಗಣಿಸಿ ಕರ್ನಾಟಕ ನಾಗರೀಕ ಸೇವಾ ನಿಯಮಗಳು, 1958ರ ನಿಯಮ 8(15)(ಎಫ್) ರನ್ವಯ ಕಡ್ಡಾಯ ನಿರೀಕ್ಷಣಾವಧಿಯೆಂದು ಸರ್ಕಾರವು ಪರಿಗಣಿಸಿದೆ.

ಸದರಿ ಆದೇಶವನ್ನು ಸರ್ಕಾರದ ಆದೇಶ ಸಂ : ಎಫ್‌ಡಿ 1 ಟಿಎಫ್‌ಪಿ 1996, ದಿನಾಂಕ : 10–07–1996(ಐಟಂ ನಂ. 8)ರಲ್ಲಿ ಪ್ರತ್ಯಾಯೋಜಿಸಲಾಗಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಸಿ. ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ

(ಕಾ. ಮತ್ತು ಸು. ಹಾಗೂ ಕಾಫಿಪೋಸಾ ಮತ್ತು ಅಭಿಯೋಗಗಳು)

ಪಿ.ಆರ್. 229

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ :** ಶ್ರೀ ಕೆ.ಗೋಪಾಲಕೃಷ್ಣ, ಹಿಂದಿನ ಉಪ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಚಿಕ್ಕಬಳ್ಳಾಪುರ ಹಾಲಿ ಉಪ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಚಾಮರಾಜನಗರ ಇವರ ವಿರುದ್ಧ ಹೂಡಲಾಗಿರುವ ಆರೋಪಗಳಿಗೆ ಸಂಬಂಧಿಸಿದಂತೆ ಇಲಾಖಾ ವಿಚಾರಣೆ ಕುರಿತು–ಆದೇಶ.

**ಓದಲಾಗಿದೆ :**
1. ಸರ್ಕಾರದ ಕಾರಣ ಕೇಳುವ ನೋಟೀಸ್ ಸಂ.ಮಮಇ 345 ಎಸ್‌ಜೆಡಿ 2008 ದಿನಾಂಕ : 18–07–2008.
2. ಶ್ರೀ ಕೆ.ಗೋಪಾಲಕೃಷ್ಣ, ಉಪ ನಿರ್ದೇಶಕರು ಇವರು ಸರ್ಕಾರದ ನೋಟೀಸಿಗೆ ನೀಡಿದ ಹೇಳಿಕೆ ದಿನಾಂಕ : 06–08–2008.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ. (1)ರ ದಿ : 18–07–2008ರ ಸರ್ಕಾರದ ಕಾರಣ ಕೇಳುವ ನೋಟೀಸಿನೊಂದಿಗೆ ಜಾರಿ ಮಾಡಿದ ಆರೋಪ ಪಟ್ಟಿಯಲ್ಲಿ ಶ್ರೀ ಕೆ.ಗೋಪಾಲಕೃಷ್ಣ, ಉಪ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಚಿಕ್ಕಬಳ್ಳಾಪುರ ರವರು ಜಿಲ್ಲಾ ಮಟ್ಟದ ಮಾರುಕಟ್ಟೆ ಸಂಕೀರ್ಣ/ಸ್ತ್ರೀಶಕ್ತಿ ಭವನ ನಿರ್ಮಾಣದ ರೂಪು–ರೇಷೆಗಳನ್ನು ಸಲ್ಲಿಸದೆ ಇರುವುದು ಹಾಗೂ ಚಿಕ್ಕಬಳ್ಳಾಪುರ ಜಿಲ್ಲಾ ವ್ಯಾಪ್ತಿಗೆ ಮಂಜೂರಾಗಿರುವ ಅಂಗನವಾಡಿ ಕೇಂದ್ರಗಳಿಗೆ ಕಾರ್ಯಕರ್ತೆಯರನ್ನು ಆಯ್ಕೆ ಮಾಡಿ ಕೇಂದ್ರಗಳನ್ನು ಪ್ರಾರಂಭಿಸಲು ಕ್ರಮ ಕೈಗೊಳ್ಳದೇ ಇರುವುದು, ದಿನಾಂಕ : 31–03–2008ಕ್ಕೆ ಕೊನೆಗೊಂಡಂತೆ ಸಮಗ್ರ ಶಿಶು ಅಭಿವೃದ್ಧಿ ಯೋಜನಾ ಕಾರ್ಯಕ್ರಮದಡಿ ಭರಿಸಿದ ಆಡಳಿತ ಖರ್ಚಿನ ವಿವರ ಸಲ್ಲಿಸದೇ ಇರುವುದು, 2007–08 ನೇ ಸಾಲಿನಲ್ಲಿ ಡಿಸೆಂಬರ್ 2007 ರವರೆಗೆ ಪೂರಕ ಪೌಷ್ಠಿಕ ಆಹಾರ ಕಾರ್ಯಕ್ರಮದಲ್ಲಿ ಸಾಧನೆ ಕಡಿಮೆ ಇರುವ ಬಗ್ಗೆ ಹಾಗೂ ಬಿಡುಗಡೆಯಾದ ಅನುದಾನದಲ್ಲಿ ಶೇ.75 ಕ್ಕಿಂತ ಕಡಿಮೆ ಖರ್ಚು ಮಾಡಿರುವ ಬಗ್ಗೆ ವಿವರಣೆ ಸಲ್ಲಿಸದೇ ಇರುವುದು ಹಾಗೂ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳ ಕಛೇರಿಯಲ್ಲಿ ದಾಖಲಾತಿ ಸಾಮಗ್ರಿಗಳು ಅಸ್ತವ್ಯಸ್ತವಾಗಿರುವ ಬಗ್ಗೆ ಗಮನಿಸದೇ ಉದಾಸೀನ ತೋರಿ ಕರ್ತವ್ಯ ಲೋಪ ಎಸಗಿರುವ ಬಗ್ಗೆ ದೋಷಾರೋಪಣ ಪಟ್ಟಿಯನ್ನು ಜಾರಿ ಮಾಡಲಾಗಿತ್ತು.

ಮೇಲೆ ಓದಲಾದ ಕ್ರ.ಸಂ.(2)ರ ದಿನಾಂಕ : 06–08–2008 ರಲ್ಲಿ ಶ್ರೀ ಕೆ.ಗೋಪಾಲಕೃಷ್ಣ, ಉಪ ನಿರ್ದೇಶಕರು, ಇವರು ಸರ್ಕಾರದ ನೋಟೀಸಿಗೆ ಹೇಳಿಕೆ ಸಲ್ಲಿಸಿ ಉಪ ನಿರ್ದೇಶಕರ ಕಚೇರಿಯಲ್ಲಿ ಸಿಬ್ಬಂದಿ ಕೊರತೆಯಿದ್ದು ವಿವಿಧ ಕಾರ್ಯಕ್ರಮಗಳ ಬಗ್ಗೆ ಮೇಲ್ವಿಚಾರಣೆ ಮಾಡಲು ವಿಳಂಬವಾಗಿದೆ ಎಂದು ಹಾಗೂ ಜಿಲ್ಲೆಗೆ ನಿಗದಿಯಾದ ಅನುದಾನಗಳನ್ನು ಹೊಂದಾಣಿಕೆಯಾಗುವಲ್ಲಿ ತಡವಾದ ಕಾರಣ ಆರ್ಥಿಕ ಪ್ರಗತಿಗಳು ಕುಂಠಿತವಾಗಿದೆ ಎಂದು ಅವರ ವಿರುದ್ಧ ಹೂಡಲಾದ ವಿಚಾರಣೆಯನ್ನು ಕೈಬಿಡುವಂತೆ ಕೋರಿಕೊಂಡಿರುತ್ತಾರೆ.

ಆಪಾದಿತ ಅಧಿಕಾರಿಗಳ ವಿರುದ್ಧದ ಆರೋಪಗಳನ್ನು ಪರಿಶೀಲಿಸಿದಾಗ, ಅವರು ಪಾರದರ್ಶಕತೆಯಿಲ್ಲದೆ ಕೆಲವು ಕ್ರಮಗಳನ್ನು ತೆಗೆದುಕೊಂಡಿರುವುದು ಕಂಡುಬಂದಿರುವ ಹಿನ್ನೆಲೆಯಲ್ಲಿ ಹಾಗೂ ಅವರ ಮೇಲಿನ ಆರೋಪಗಳನ್ನು ನಿರಾಕರಿಸಿರುವುದರಿಂದ ಎಲ್ಲಾ ಆರೋಪಗಳಲ್ಲಿನ ಸತ್ಯಾಸತ್ಯತೆಯ ಬಗ್ಗೆ ವಿಚಾರಣೆ ಮೂಲಕ ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ನಡೆಸಲು ಸರ್ಕಾರವು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಮಮಇ 345 ಎಸ್‌ಜೆಡಿ 2008, ಬೆಂಗಳೂರು, ದಿನಾಂಕ: 12–01–2011.**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ & ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಕೆ.ಗೋಪಾಲಕೃಷ್ಣ, ಹಿಂದಿನ ಉಪ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಚಿಕ್ಕಬಳ್ಳಾಪುರ ಇವರ ವಿರುದ್ಧ ಮಾಡಲಾದ ಆರೋಪಗಳ ಕುರಿತು ವಿಚಾರಣೆ ನಡೆಸಲು ಶ್ರೀ ಕೆ.ಎನ್.ನಾಗೇಂದ್ರಕುಮಾರ್, ನಿವೃತ್ತ ನ್ಯಾಯಾಧೀಶರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಕ ಮಾಡಲಾಗಿದೆ.

ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ & ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಎಂ.ಜಿ.ಗೋಪಾಲ್, ನಿರೂಪಣಾಧಿಕಾರಿ, ಉಪ ನಿರ್ದೇಶಕರ ಕಛೇರಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಕಛೇರಿ, ಚಿಕ್ಕಬಳ್ಳಾಪುರ ರವರನ್ನು ಮಂಡನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿದೆ. ಈ ವಿಚಾರಣೆಯನ್ನು 3 ತಿಂಗಳೊಳಗಾಗಿ ಮುಕ್ತಾಯಗೊಳಿಸಿ ವರದಿ ಸಲ್ಲಿಸುವಂತೆ ಆದೇಶಿಸಿದೆ.

ಈ ವಿಚಾರಣೆಗಾಗಿ ವಿಚಾರಣಾಧಿಕಾರಿಗಳು ಸರ್ಕಾರಿ ಆದೇಶ ಸಂ.ಸಿಆಸುಇ/22/ಸೇಇವಿ/2007/ದಿ : 11–04–2008 ರನ್ವಯ ರೂ. 8000/–ಗಳ ಗೌರವಧನ ಹಾಗೂ ವಾಹನಭತ್ಯೆ ರೂ. 1500/–ಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಕಮಲಮ್ಮ**

ಪಿ.ಆರ್. 230

ಸರ್ಕಾರದ ಅಧೀನ ಕಾರ್ಯದರ್ಶಿ–2

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

## ENERGY SECRETARIAT

Sub: Transfer of 1.25 MW wind power capacity in favour of M/s Tirupati Microtech Private Limited-reg.

Read:
1. Government Order No.: DE 59 NCE 2004 dated: 08-03-2004.
2. Government Order No.: EN 393 NCE 2005 dated: 28-12-2005.
3. Government Order No.: EN 180 NCE 2007 dated: 15-05-2007.
3. Letter No. KRED/08/TMPL-1.25(K-556) SRL/2010/3525 dated: 13/20-12-2010 received from the Managing Director, Karnataka Renewable Energy Development Limited, Bangalore.

**PREAMBLE:**

In the Government Order read at (1) above, sanction has been accorded for implementation of 125 MW capacity Wind Power Project at Shimoga, Bellary, Chitradurga, Chikkamagalur, Tumkur and Dharwad Districts to M/s Sarjan Realities Private Limited. Out of 125 MW wind power capacity the part capacity of 33 MW (11+22=33 MW) is allotted at Shimoga District.

In the Government Order read at (2) above, sanction has been accorded for enhancement of wind power capacity from 33 MW to 44.4 MW Kalavi Ranganagudda, Maddapura, Gangavannadasara State Forest, Horogoppa in Shimoga District to M/s Sarjan Realities Limited.

In the Government Order read at (3) above, sanction has been accorded for enhancement of wind power capacity from 44.4 MW to 111.00 MW at Gangavanasara and Kudrekonda areas in Shimoga And Davanagere Districts to M/s Sarjan Realities Limited.

The Managing Director, Karnataka Renewable Energy Development Limited, Bangalore in his letter read at (4) above, has recommended to the Government for transfer of 1.25 MW wind power capacity in favour of M/s Tirupati Microtech Private Limited out of the sanctioned 111.00 MW capacity of M/s Sarjan Realities Limited at Erekatte village, Shikaripura Taluk, Shimoga District.

The proposal has been examined in detail and following Orders issued:-

**Government Order No.: EN 501 NCE 2010, Bangalore, Dated: 10-01-2011**

Government accords approval for 1.25 MW wind power capacity in favour of M/s Tirupati Microtech Private Limited out of the sanctioned 111.00 MW capacity to M/s Sarjan Realities Limited at Erekatte village, Shikaripura Taluk, Shimoga District as detailed below and subject to the following conditions :-

| Village Name | Taluk & District | Land Survey Number | Extent in land | Wind Turbine Generator location No. |
|---|---|---|---|---|
| Erekatte | Shikaripura/Shimoga | 14 | 0.25 Hectares per WTG of capacity 1.25 MW | K-556 |

1. M/s Tirupati Microtech Private Limited shall execute an agreement with Government within 45 (forty five) days from the date of issue of this Order.
2. PPA is assigned to MESCOM. MESCOM shall execute the PPA with M/s Tirupati Microtech Private Limited with in a period of one month.
3. The developer should commission the project during the Financial Year 2010-11.
4. The Government reserves the right to Cancel/modify this Order.

The other terms and conditions of the Government Order read at (1) above shall **IPSO FACTO** applicable.

By Order and in the name of the Governor of Karnataka

PR. No. 231

**Suresh. B. Krishnappanavar**
Under Secretary to Government
Energy Department

## ENERGY SECRETARIAT

Sub: Transfer of 1.25 MW wind power capacity in favour of M/s RameshKumar Hanjarimal Rathod-reg.

Read:
1. Government Order No.: DE 59 NCE 2004 dated: 08-03-2004.
2. Government Order No.: EN 393 NCE 2005 dated: 28-12-2005.
3. Government Order No.: EN 180 NCE 2007 dated: 15-05-2007.
4. Letter No. KRED/08/RHR-1.25(K-566) SRL/2010/3526 dated: 13/20-12-2010 received from the Managing Director, Karnataka Renewable Energy Development Limited, Bangalore.

**PREAMBLE:**

In the Government Order read at (1) above, sanction has been accorded for implementation of 125 MW capacity Wind Power Project at Shimoga, Bellary, Chitradurga, Chikkamagalur, Tumkur and Dharwad Districts to M/s Sarjan Realities Private Limited. Out of 125 MW wind power capacity the part capacity of 33 MW (11+22=33 MW) is allotted at Shimoga District.

In the Government Order read at (2) above, sanction has been accorded for enhancement of wind power capacity from 33 MW to 44.4 MW Kalavi Ranganagudda, Maddapura, Gangavannadasara State Forest, Horogoppa in Shimoga District to M/s Sarjan Realities Limited.

In the Government Order read at (3) above, sanction has been accorded for enhancement of wind power capacity from 44.4 MW to 111.00 MW at Gangavanasara and Kudrekonda areas in Shimoga And Davanagere Districts to M/s Sarjan Realities Limited.

The Managing Director, Karnataka Renewable Energy Development Limited, Bangalore in his letter read at (4) above, has recommended to the Government for transfer of 1.25 MW wind power capacity in favour of M/s Rameshkumar Hanjarimal Rathod out of the sanctioned 111.00 MW capacity of M/s Sarjan Realities Limited at Shidaganahalu village, Shikaripura Taluk, Shimoga District.

The proposal has been examined in detail and following Orders issued:-

**Government Order No.: EN 502 NCE 2010, Bangalore, Dated: 10-01-2011**

Government accords approval for 1.25 MW wind power capacity in favour of M/s Rameshkumar Hanjarimal Rathod out of the sanctioned 111.00 MW capacity to M/s Sarjan Realities Limited at Shidaganahalu village, Shikaripura Taluk, Shimoga District as detailed below and subject to the following conditions :-

| Village Name | Taluk & District | Land Survey Number | Extent in land | Wind Turbine Generator location No. |
|---|---|---|---|---|
| Shidaganahalu | Shikaripura/Shimoga | 1 | 0.25 Hectares per WTG of capacity 1.25 MW | K-566 |

1. M/s Rameshkumar Hanjarimal Rathod shall execute an agreement with Government within 45 (forty five) days from the date of issue of this Order.
2. PPA is assigned to MESCOM. MESCOM shall execute the PPA with M/s Rameshkumar Hanjarimal Rathod with in a period of one month.
3. The developer should commission the project during the Financial Year 2010-11.
4. The Government reserves the right to Cancel/modify this Order.

The other terms and conditions of the Government Order read at (1) above shall **IPSO FACTO** applicable.

By Order and in the name of the Governor of Karnataka

PR. No. 232

**Suresh. B. Krishnappanavar**
Under Secretary to Government
Energy Department

## ENERGY SECRETARIAT

Sub: Transfer of 2.1 MW wind power capacity in favour of M/s Maris Spinners Limited-reg.

Read:
1. Government Order No.: DE 59 NCE 2004 dated: 08-03-2004.
2. Government Order No.: EN 386 NCE 2005 dated: 28-12-2005.
3. Government Order No.: EN 555 NCE 2009 dated: 25-11-2009.
4. Letter No. KRED/08/MSL-SRL/2010/3528 dated: 16/20-12-2010 received from the Managing Director, Karnataka Renewable Energy Development Limited, Bangalore.

**PREAMBLE:**

In the Government Order read at (1) above, sanction has been accorded for implementation of 125 MW capacity Wind Power Project at Shimoga, Bellary, Chitradurga, Chikkamagalur, Tumkur and Dharwad Districts to M/s Sarjan Realities Private Limited. Out of 125 MW wind power capacity the part capacity of 3 MW is allotted at Halavagalu village, Bellary District (now Davanagere District).

In the Government Order read at (2) above, sanction has been accorded for enhancement of wind power capacity from 3 MW to 5.4 MW at Halavagalu village, Bellary District (now Davanagere District) to M/s Sarjan Realities Limited.

In the Government Order read at (3) above, sanction has been accorded for enhancement of sanctioned wind power capacity from 5.4 MW to 8.4 MW in favour of M/s Sarjan Realities Limited at Halavagalu village, Davanagere District .

The Managing Director, Karnataka Renewable Energy Development Limited, Bangalore in his letter read at (4) above, has recommended to the Government for transfer of 2.1 MW wind power capacity in favour of M/s Maris Spinners Limited from out of the sanctioned 8.4 MW capacity of M/s Sarjan Realities Limited at Halavagalu village, Harapanahalli Taluk, Davanagere District.

The proposal has been examined in detail and following Orders issued:-

**Government Order No.: EN 505 NCE 2010, Bangalore, Dated: 10-01-2011**

Government accords approval for transfer of 2.1 MW wind power capacity in favour of M/s Maris Spinners Limited out of the sanctioned 8.4 MW capacity to M/s Sarjan Realities Limited at Halavagalu village, Harapanahalli Taluk, Davanagere District as detailed below and subject to the following conditions :-

| Village Name | Taluk & District | Land Survey Number | Extent in land | Wind Turbine Generator location No. |
|---|---|---|---|---|
| Halavagalu | Harpanahalli/ Davanagere | 157H | 2 Acres per WTG of capacity 2.1 MW for 1 No. | HER-03 |

1. M/s Maris Spinners Limited shall execute an agreement with Government within 45 (forty five) days from the date of issue of this Order.
2. PPA is assigned to BESCOM. BESCOM shall execute the PPA with M/s Maris Spinners Limited with in a period of one month.
3. The developer should commission the project during the Financial Year 2010-11.
4. The Government reserves the right to Cancel/modify this Order.

The other terms and conditions of the Government Order read at (1) above shall **IPSO FACTO** applicable.

By Order and in the name of the Governor of Karnataka

PR. No. 233

**Suresh. B. Krishnappanavar**
Under Secretary to Government
Energy Department

ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ, ಬೆಂಗಳೂರು ಇವರ ಯೋಜನೆ ಹಂಚಿಕೆಯಾಗಿ 12 ವರ್ಷ ಕಳೆದರೂ ಯೋಜನೆ ಕಮಿಷನ್ ಮಾಡದಿರುವುದರಿಂದ ಯೋಜನೆಯ ಹಂಚಿಕೆ ಆದೇಶ ರದ್ದುಗೊಳಿಸಲು ಶಿಫಾರಸ್ಸು ಮಾಡಿದ ಹಿನ್ನೆಲೆಯಲ್ಲಿ ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಆದೇಶದಲ್ಲಿ ಸರ್ಕಾರಿ ಆದೇಶಗಳ ಸಂಖ್ಯೆ : ಡಿಇ 133 ಎನ್‌ಸಿಇ 97(4) ದಿನಾಂಕ : 20–4–1998 ಮತ್ತು ಇಎನ್ 190 ಎನ್‌ಸಿಇ 2006 ದಿನಾಂಕ : 25–7–2006 ರಲ್ಲಿ ಮೆ॥ ಇಂಡೊವಿಂಡ್ ಎನರ್ಜಿ ಲಿಮಿಟೆಡ್ ಇವರಿಗೆ (ಮೆ॥ ದೇವಲಿನಾ ಪವರ್ ಪ್ರೈವೇಟ್ ಲಿಮಿಟೆಡ್) ಚಿತ್ರದುರ್ಗ ಜಿಲ್ಲೆಯ ಜೋಗಿಮಟ್ಟಿ ಎಂಬಲ್ಲಿ 8 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಹಂಚಿಕೆ ಆದೇಶ ಮತ್ತು 8 ರಿಂದ 9 ಮೆಗಾ ವ್ಯಾಟ್‌ಗೆ ಸಾಮರ್ಥ್ಯ ಹೆಚ್ಚಿಸಿ ಹೊರಡಿಸಲಾದ ಆದೇಶವನ್ನು ಹಾಗೂ ಈ ಸಂಬಂಧ ಸರ್ಕಾರದೊಂದಿಗೆ ಮಾಡಿಕೊಂಡಿರುವ ಒಡಂಬಡಿಕೆಯನ್ನು ರದ್ದು ಪಡಿಸಲಾಗಿತ್ತು.

ಮೆ॥ ಇಂಡೊವಿಂಡ್ ಎನರ್ಜಿ ಲಿಮಿಟೆಡ್ ಇವರು ಯೋಜನೆಗೆ ಬೇಕಾದ 132.53 ಎಕರೆ ಜಮೀನನ್ನು ಖಾಸಗಿಯವರಿಂದ ವಶಪಡಿಸಿಕೊಂಡಿದ್ದು ಹಾಗೂ ಯೋಜನೆಯನ್ನು ದಿನಾಂಕ : 31–3–2011ರೊಳಗಾಗಿ ಅನುಷ್ಠಾನಗೊಳಿಸುವುದಾಗಿ ಭರವಸೆ ನೀಡಿರುವುದರಿಂದ, ಈಗಾಗಲೇ ರದ್ದುಪಡಿಸಲಾಗಿರುವ 9.00 ಮೆಗಾ ವ್ಯಾಟ್ ಸಾಮರ್ಥ್ಯದ ಪನವ ವಿದ್ಯುತ್ ಯೋಜನೆಯ ರದ್ದತಿ ಆದೇಶವನ್ನು ಹಿಂಪಡೆದು, ಯೋಜನೆಯನ್ನು ಪೂರ್ವಸ್ಥಿತಿಗೆ ತರುವಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ, ಬೆಂಗಳೂರು ಇವರು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ :–

**ಸರ್ಕಾರದ ಆದೇಶ ಸಂಖ್ಯೆ : ಇಎನ್ 371 ಎನ್‌ಸಿಇ 2010, ಬೆಂಗಳೂರು, ದಿನಾಂಕ : 10–1–2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸರ್ಕಾರಿ ಆದೇಶ ಸಂಖ್ಯೆ : ಇಎನ್ 457 ಎನ್‌ಸಿಇ 2008 ದಿನಾಂಕ : 16–9–2009 ರ ರದ್ದತಿ ಆದೇಶವನ್ನು ಹಿಂಪಡೆದು, ಯೋಜನೆಯನ್ನು ದಿನಾಂಕ : 31–3–2011ರೊಳಗಾಗಿ ಪ್ರಾರಂಭ ಮಾಡಬೇಕೆಂಬ (commissioning) ಷರತ್ತಿಗೊಳಪಟ್ಟು, ಮೆ॥ ಇಂಡೊವಿಂಡ್ ಎನರ್ಜಿ ಲಿಮಿಟೆಡ್ ಇವರಿಗೆ ಚಿತ್ರದುರ್ಗ ಜಿಲ್ಲೆಯ ಪಲವನಹಳ್ಳಿ, ಜೋಗಿಮಟ್ಟಿ ವಲಯ ಎಂಬಲ್ಲಿ ಹಂಚಿಕೆ ಮಾಡಲಾಗಿದ್ದ 9.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಪೂರ್ವಸ್ಥಿತಿಗೆ ತರಲಾಗಿದೆ.

ಈ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿನ ಇತರೆ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

ಪಿ. ಆರ್. 267

## ಇಂಧನ ಸಚಿವಾಲಯ

**ವಿಷಯ :** ಮೆ॥ ಕೊಡಗು ಹೈಡಲ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಇವರ 3.00 ಮೆಗಾ ವ್ಯಾಟ್ ಸಾಮರ್ಥ್ಯದ ಬೀದಳ್ಳಿ ಕಿರು ಜಲ ವಿದ್ಯುತ್ ಯೋಜನೆಯ ಕಾಲಾವಕಾಶ ವಿಸ್ತರಣೆ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ : ಇಎನ್ 212 ಎನ್‌ಸಿಇ 2005, ದಿನಾಂಕ : 22–8–2005.
2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರಗಳ ಸಂಖ್ಯೆ : ಕೆಆರ್‌ಇಡಿ/06/ಬೀದಳ್ಳಿ/ಎಂಹೆಚ್‌ಎಸ್/2010/1768 ದಿನಾಂಕ : 10/11-6-2010.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಮೆ॥ ಕೊಡಗು ಹೈಡಲ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಕೊಡಗು ಜಿಲ್ಲೆಯ ಸೋಮವಾರಪೇಟೆ ತಾಲ್ಲೂಕಿನ ಬೀದಳ್ಳಿ ಗ್ರಾಮದ ಬಳಿ ಕುಮಾರಧಾರ ನದಿಗೆ ಅಡ್ಡಲಾಗಿ 3.00 ಮೆಗಾ ವ್ಯಾಟ್ ಸಾಮರ್ಥ್ಯದ ಬೀದಳ್ಳಿ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

ಸದರಿ ಯೋಜನೆಯ ಅನುಷ್ಠಾನದ ಅವಧಿಯು 3 ವರ್ಷಗಳಿಗೆ ಸೀಮಿತವಾಗಿದ್ದು, ಈ ಅವಧಿಯಲ್ಲಿ ಮೆ॥ ಪುಷ್ಪಗಿರಿ ಪವರ್ ಪ್ರೈವೇಟ್ ಲಿಮಿಟೆಡ್ ಇವರು ಈ ಯೋಜನೆಯ ವಿರುದ್ಧ ರಾಜ್ಯ ಉಚ್ಚ ನ್ಯಾಯಾಲಯದಲ್ಲಿ ದಾವೆ ಹೂಡಿದ್ದರಿಂದ ಪ್ರಗತಿಯು ಕುಂಠಿತಗೊಂಡಿದ್ದು, ಘನ ನ್ಯಾಯಾಲಯದ ಪ್ರಕರಣವು ದಿನಾಂಕ : 18–9–2008 ರಂದು ವಿಲೇಯಾಗಿರುತ್ತದೆಯೆಂದು ತಿಳಿಸುತ್ತ, ಈ ಯೋಜನೆಯನ್ನು ಅನುಷ್ಠಾನ ಮಾಡಲು ಅಭಿವೃದ್ಧಿದಾರರು ಕ್ರಮವಹಿಸುತ್ತಿದ್ದು, ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶವನ್ನು ದಿನಾಂಕ : 30–9–2011 ರವರೆಗೆ ವಿಸ್ತರಿಸಲು ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಶಿಫಾರಸ್ಸು ಮಾಡಿ ಸರ್ಕಾರಕ್ಕೆ ಅಭಿವೃದ್ಧಿದಾರರ ಕೋರಿಕೆಯ ಮೇರೆಗೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ :–

**ಸರ್ಕಾರದ ಆದೇಶ ಸಂಖ್ಯೆ : ಇಎನ್ 250 ಎನ್‌ಸಿಇ 2010, ಬೆಂಗಳೂರು, ದಿನಾಂಕ : 14–1–2011.**

ಮೆ॥ ಕೊಡಗು ಹೈಡಲ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಕೊಡಗು ಜಿಲ್ಲೆಯ ಸೋಮವಾರಪೇಟೆ ತಾಲ್ಲೂಕಿನ ಬೀದಳ್ಳಿ ಗ್ರಾಮದ ಬಳಿ ಕುಮಾರಧಾರ ನದಿಗೆ ಅಡ್ಡಲಾಗಿ ಹಂಚಿಕೆ ಮಾಡಲಾದ 3.00 ಮೆಗಾ ವ್ಯಾಟ್ ಸಾಮರ್ಥ್ಯದ ಬೀದಳ್ಳಿ ಕಿರು ಜಲ ವಿದ್ಯುತ್ ಯೋಜನೆಯನ್ನು ಅನುಷ್ಠಾನ ಮಾಡಲು ಕಾಲಾವಕಾಶವನ್ನು ದಿನಾಂಕ : 30–9–2011 ರವರೆಗೆ ವಿಸ್ತರಿಸಲಾಗಿದೆ.

ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

ಪಿ. ಆರ್. 268

## ಇಂಧನ ಸಚಿವಾಲಯ

**ವಿಷಯ :** M/s Mysore Mercantile Co. Ltd. ಇವರ 4.00 ಮೆಗಾ ವ್ಯಾಟ್ ಸಾಮರ್ಥ್ಯದ ವರಾಹಿ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 8.00 ಮೆಗಾ ವ್ಯಾಟ್‌ಗೆ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ : ಇಎನ್ 302 ಎನ್‌ಸಿಇ 2007, ದಿನಾಂಕ : 19–5–2009.
2. ಸರ್ಕಾರದ ತಿದ್ದುಪಡಿ ಸಂಖ್ಯೆ : ಇಎನ್ 302 ಎನ್‌ಸಿಇ 2007, ದಿನಾಂಕ : 16–9–2009.
3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರಗಳ ಸಂಖ್ಯೆ : ಕೆಆರ್‌ಇಡಿ/06/ಎಸ್‌ಹೆಚ್–313/ವರಾಹಿ/2010/06 ದಿನಾಂಕ : 29–12–2010/1–1–2011.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ M/s Mysore Mercantile Co. Ltd. ಇವರಿಗೆ ಉಡುಪಿ ಜಿಲ್ಲೆಯ ಕುಂದಾಪುರ ತಾಲ್ಲೂಕಿನ ಹೊಸಗಡ್ಡೆ ಗ್ರಾಮದ ಬಳಿ ವರಾಹಿ ನದಿಗೆ ಅಡ್ಡವಾಗಿ 4.00 ಮೆಗಾ ವ್ಯಾಟ್ ಸಾಮರ್ಥ್ಯದ ವರಾಹಿ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ತಿದ್ದುಪಡಿ ಆದೇಶದಲ್ಲಿ **"ಹೊಸಗಡ್ಡೆ ಗ್ರಾಮ"** ಎಂಬುದರ ಬದಲಾಗಿ **"ಹೊಸಗದ್ದೆ ಹತ್ತಿರ ಕುಳಂಜೆ ಗ್ರಾಮ"** ಎಂದು ತಿದ್ದುಪಡಿ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಸದರಿ ಯೋಜನೆ ಸ್ಥಳದಲ್ಲಿ ಲಭ್ಯವಿರುವ 7.5 ಮೀಟರ್ ಹೆಡ್‌ನ್ನು ಅಳವಡಿಸಿಕೊಂಡು ಹಾಗೂ 134 ಕ್ಯುಮೆಕ್ಸ್ ನೀರಿನ ಹರಿವನ್ನು ಉಪಯೋಗಿಸಿಕೊಂಡು ಸಾಮರ್ಥ್ಯವನ್ನು 4.00 ಮೆಗಾ ವ್ಯಾಟ್‌ನಿಂದ 8.00 ಮೆಗಾ ವ್ಯಾಟ್‌ಗೆ ಹೆಚ್ಚಿಸಬಹುದೆಂದು ಅಭಿವೃದ್ಧಿದಾರರ ಕೋರಿಕೆಯ ಮೇರೆಗೆ ಶಿಫಾರಸ್ಸು ಮಾಡಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ :–

**ಸರ್ಕಾರದ ಆದೇಶ ಸಂಖ್ಯೆ : ಇಎನ್ 10 ಎನ್‌ಸಿಇ 2011, ಬೆಂಗಳೂರು, ದಿನಾಂಕ : 18–1–2011.**

M/s Mysore Mercantile Co. Ltd. ಇವರಿಗೆ ಉಡುಪಿ ಜಿಲ್ಲೆಯ ಕುಂದಾಪುರ ತಾಲ್ಲೂಕಿನ ಹೊಸಗಡ್ಡೆ ಹತ್ತಿರ ಕುಳಂಜೆ ಗ್ರಾಮದ ಬಳಿ ವರಾಹಿ ನದಿಗೆ ಅಡ್ಡಲಾಗಿ ಹಂಚಿಕೆ ಮಾಡಲಾದ 4.00 ಮೆಗಾ ವ್ಯಾಟ್ ಸಾಮರ್ಥ್ಯದ ವರಾಹಿ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 8.00 ಮೆಗಾ ವ್ಯಾಟ್‌ಗೆ ಹೆಚ್ಚಿಸಲಾಗಿದೆ.

ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಮೇಲೆ ಓದಲಾದ (1)ರ ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

ಪಿ. ಆರ್. 269

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯದ ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕ ವ್ಯವಹಾರಗಳ ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಪೂರಕ ಸಿಬ್ಬಂದಿಗಳೊಂದಿಗೆ ಮುಂದುವರಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 642 ಸಅಸೇ 2009, ದಿನಾಂಕ : 18–1–2010.
2. ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕ ವ್ಯವಹಾರಗಳ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ : ಆನಾಸ 380 ಇಭತ 2010, ದಿನಾಂಕ : 1–1–2011.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾಗಿರುವ ದಿನಾಂಕ : 18–1–2010 ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಆಹಾರ ನಾಗರೀಕ ಸರಬರಾಜು ಮತ್ತು ಗ್ರಾಹಕರ ಇಲಾಖೆ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಹುದ್ದೆಯನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ : 1–1–2010 ರಿಂದ ಜಾರಿಗೆ ಬರುವಂತೆ ಒಂದು ವರ್ಷದ ಅವಧಿಗೆ ಮುಂದುವರೆಸಲಾಗಿತ್ತು. ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾಗಿರುವ ದಿನಾಂಕ : 1–1–2011 ರ ಅನಧಿಕೃತ ಟಿಪ್ಪಣಿಯಲ್ಲಿ ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕ ವ್ಯವಹಾರಗಳ ಇಲಾಖೆಯ ಈ ಹುದ್ದೆಗಳನ್ನು ದಿನಾಂಕ : 1–1–2011 ರಿಂದ ಜಾರಿಗೆ ಬರುವಂತೆ ಮುಂದುವರಿಸುವಂತೆ ಕೋರಲಾಗಿದೆ. ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 17 ಸಅಸೇ 2011, ಬೆಂಗಳೂರು, ದಿನಾಂಕ : 13ನೇ ಜನವರಿ 2011.**

ಕರ್ನಾಟಕ ಸರ್ಕಾರ ಸಚಿವಾಲಯದ ಆಹಾರ ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ : 1–1–2011 ರಿಂದ ಜಾರಿಗೆ ಬರುವಂತೆ ಒಂದು ವರ್ಷದ ಅವಧಿಗೆ ಮುಂದುವರಿಸಲಾಗಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ : 10–7–1996 ರಲ್ಲಿ ಪ್ರತ್ಯಾಯೋಜಿಸಿರುವ ಅಧಿಕಾರದ ಅನ್ವಯ ಆರ್ಥಿಕ ಇಲಾಖೆ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎ.ಆರ್. ವಿಜಯಾನಂದ ಶರ್ಮಾ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–3).

ಪಿ. ಆರ್. 270

## ಒಳಾಡಳಿತ ಸಚಿವಾಲಯ

**ವಿಷಯ** : ಶ್ರೀ ಎಂ. ಎನ್. ದೇವರಾಜು, ಮಾಜಿ ಪಿ.ಸಿ. ಸಿ.ಎ.ಆರ್. ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ** : 1) ಶಿಸ್ತು ಪ್ರಾಧಿಕಾರಿ ಹಾಗೂ ಉಪ ಆರಕ್ಷಕ ಆಯುಕ್ತರು, ಸಿ.ಎ.ಆರ್. ಉತ್ತರ, ಬೆಂಗಳೂರು ಇವರ ಆದೇಶ ಸಂಖ್ಯೆ: ಡಿಇ04/2005–06, (ಓ.ಬಿ. 06/2006–07) ದಿನಾಂಕ 24–5–2006.

2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಪರ ಪೊಲೀಸ್ ಕಮೀಷನರ್, ಬೆಂಗಳೂರು ನಗರ, ಇವರ ಆದೇಶ ಸಂಖ್ಯೆ: 04/ಅಪೀಲು 2/2008, ದಿನಾಂಕ 10–10–2008.

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ 16–02–2010

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು (2)91/2009–10, ದಿನಾಂಕ 22–06–2010.

**ಪ್ರಸ್ತಾವನೆ :**

ಶ್ರೀ ಎಂ. ಎನ್. ದೇವರಾಜು, ಇವರು ಸಿ.ಎ.ಆರ್. (ಉತ್ತರ) ಬೆಂಗಳೂರಿನಲ್ಲಿ ಪಿ.ಸಿ. ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ಅನಧಿಕೃತವಾಗಿ ಗೈರುಹಾಜರಾಗಿ ಕರ್ತವ್ಯಕ್ಕೆ ಬೇಜವಾಬ್ದಾರಿತನ, ನಿರ್ಲಕ್ಷತೆ ತೋರಿಸಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ :**

1. ನೀವು ದಿನಾಂಕ 14–5–2005 ರಿಂದ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿರುತ್ತೀರಿ. ನೀವು ಕರ್ತವ್ಯಕ್ಕೆ ಹಾಜರಾಗದೆ ಗೈರುಹಾಜರಾತಿಯಲ್ಲಿ ಮುಂದುವರೆದ ಕಾರಣ ಗೈರುಹಾಜರಾತಿ ಅವಧಿಯು 21 ದಿನಗಳು ಮೀರಿದ್ದರಿಂದ ಡಿ.ಸಿ.ಪಿ. ಸಿ.ಎ.ಆರ್. (ಉತ್ತರ) ರವರ ಕಛೇರಿಯಿಂದ ನಿಮ್ಮನ್ನು "ನಾಪತ್ತೆ ಆಸಾಮಿ" ಎಂದು ಪರಿಗಣಿಸಲಾಗಿದ್ದು, ಕರ್ತವ್ಯಕ್ಕೆ ಹಿಂದಿರುಗುವಂತೆ ಸೂಚಿಸಿ ಹೊರಡಿಸಿದ್ದ ಸೂಚನಾಪತ್ರ ಸಂಖ್ಯೆ: ಗೈ:ಹಾ: 38/2005–06 ದಿನಾಂಕ 07–7–2005ನ್ನು ದಿನಾಂಕ 19–6–2005 ರಂದು ಸಹಿಮಾಡಿ ಸ್ವೀಕರಿಸಿದ್ದಾಗ್ಯೂ ಸಹ ಈವರೆವಿಗೂ ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲ.
2. ನಿಮ್ಮನ್ನು ಕರ್ತವ್ಯಕ್ಕೆ ಹಾಜರಾಗುವಂತೆ ಸೂಚಿಸಿ ಡಿ.ಸಿ.ಪಿ. ಸಿ.ಎ.ಆರ್. (ಉತ್ತರ)ರವರ ಕಛೇರಿಯಿಂದ ಜಾರಿಗೊಳಿಸಲಾದ ಅಂತಿಮ ಜ್ಞಾಪನ ಸಂಖ್ಯೆ: 84/2005–06, ದಿನಾಂಕ 02–8–2005ರ ಪ್ರತಿಯನ್ನು ದಿನಾಂಕ 07–8–2005 ರಂದು ಸಹಿಮಾಡಿ ಸ್ವೀಕರಿಸಿದ್ದಾಗ್ಯೂ ಸಹ ಈವರೆವಿಗೂ ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲ ಅನಧಿಕೃತವಾಗಿ ಗೈರುಹಾಜರಾತಿಯಲ್ಲಿ ಮುಂದುವರೆಯುತ್ತಿದ್ದೀರಿ.
3. ನಿಮ್ಮನ್ನು ಕರ್ತವ್ಯಕ್ಕೆ ಹಾಜರಾಗುವಂತೆ ಸೂಚಿಸಿ ಡಿ.ಸಿ.ಪಿ. ಸಿ.ಎ.ಆರ್. (ಉತ್ತರ) ರವರ ಕಛೇರಿಯಿಂದ ಜಾರಿಗೊಳಿಸಲಾದ ಜ್ಞಾಪನ ಸಂಖ್ಯೆ 84/2005–06, ದಿನಾಂಕ 25–8–2005ರ ಪ್ರತಿಯನ್ನು ದಿನಾಂಕ 29–8–2005 ರಂದು ಸಹಿಮಾಡಿ ಸ್ವೀಕರಿಸಿದಾಗ್ಯೂ ಸಹ ಈವರೆವಿಗೂ ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲ. ಅನಧಿಕೃತವಾಗಿ ಗೈರುಹಾಜರಾತಿಯಲ್ಲಿ ಮುಂದುವರೆಯುತ್ತಿದ್ದೀರಿ.
4. ಡಿ.ಸಿ.ಪಿ. ಸಿ.ಎ.ಆರ್. (ಉತ್ತರ) ರವರ ಕಛೇರಿಯಿಂದ ಜಾರಿಗೊಳಿಸಲಾದ ಜ್ಞಾಪನ ಸಂಖ್ಯೆ: 84/2005–06 ದಿನಾಂಕ 25–8–2005ರಲ್ಲಿ ಸೂಚಿಸಿರುವಂತೆ ನೀವು ಜ್ಞಾಪನ ಸ್ವೀಕರಿಸಿದ 07 ದಿನಗಳೊಳಗಾಗಿ ಅನಧಿಕೃತ ಗೈರುಹಾಜರಾತಿಗೆ ಸಂಬಂಧಿಸಿದಂತೆ ಸಕಾರಣವನ್ನು ನೀಡಿ ವಿವರಣೆಯೊಂದಿಗೆ ಕರ್ತವ್ಯಕ್ಕೆ ಹಾಜರಾಗುವಂತೆ ಸೂಚಿಸಲಾಗಿತ್ತು. ತಪ್ಪಿದ್ದಲ್ಲಿ ನಿಮ್ಮನ್ನು ಇಲಾಖೆಯಿಂದ ವಜಾಗೊಳಿಸಲು ಕ್ರಮ ತೆಗೆದುಕೊಳ್ಳಲಾಗುವುದಾಗಿ ಜ್ಞಾಪನದಲ್ಲಿ ತಿಳಿಸಲಾಗಿತ್ತು ಆದರ ಸಹ ಈವರೆವಿಗೂ ಕರ್ತವ್ಯಕ್ಕೆ ಹಾಜರಾಗದೆ, ತಮ್ಮ ಗೈರು ಹಾಜರಾತಿಯ ಬಗ್ಗೆ ಹಾಗೂ ತಮ್ಮ ಇರುವಿಕೆಯ ಬಗ್ಗೆ ಕಛೇರಿಗೆ ಯಾವುದೇ ಮಾಹಿತಿಯನ್ನು ನೀಡಲು ವಿಫಲರಾಗಿರುತ್ತೀರಿ."

   ಕರ್ತವ್ಯಕ್ಕೆ ಅನಧಿಕೃತವಾಗಿ ದೀರ್ಘಾವಧಿಯಾಗಿ ಗೈರುಹಾಜರಾಗುವ ಮೂಲಕ ಶಿಸ್ತಿನ ಇಲಾಖೆಯಲ್ಲಿರುವ ನೀವು ಕರ್ತವ್ಯದಲ್ಲಿ ಬೇಜವಾಬ್ದಾರಿತನ, ನಿರ್ಲಕ್ಷತೆ, ನಿಯಮ ಉಲ್ಲಂಘನೆ, ಉದಾಸೀನತೆ ಹಾಗೂ ಕರ್ತವ್ಯ ಲೋಪವನ್ನು ತೋರ್ಪಡಿಸಿರುವುದನ್ನು ಎತ್ತಿ ತೋರಿಸುತ್ತದೆ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಉಪ ಆರಕ್ಷಕ ಆಯುಕ್ತರು, ಸಿ.ಎ.ಆರ್. ಉತ್ತರ, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ 24–5–2006ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾಗೊಳಿಸಲಾಗಿದೆ. ದಿನಾಂಕ 14–5–2005 ರಿಂದ 15–01–06 ರವರೆಗಿನ ಗೈರು ಹಾಜರಾದ ಅವಧಿಯನ್ನು ವೇತನ ರಹಿತ ರಜೆಯಿಂದ ಪರಿಗಣಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಪರ ಪೊಲೀಸ್ ಆಯುಕ್ತರು, ಸಿ.ಎ.ಆರ್. ಉತ್ತರ, ಬೆಂಗಳೂರು ನಗರ, ಇವರು ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿನಾಂಕ 10–10–2008ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 42 ಪೊಸಿಅ 2010, ಬೆಂಗಳೂರು, ದಿನಾಂಕ: 14-01-2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಎಂ. ಎನ್. ದೇವರಾಜು, ಸಿ.ಎ.ಆರ್. (ಉತ್ತರ) ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ. ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. ನಂ. 278

## ಒಳಾಡಳಿತ ಸಚಿವಾಲಯ

**ವಿಷಯ** : ಕುಮಾರಿ ಗೌರವ್ವ ಎಸ್. ಗಡಕೇರಿ, ದ್ವಿ.ದ.ಸ. ರವರ ಪರಿವೀಕ್ಷಣಾ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ** : ಪೊಲೀಸ್ ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ರವರ ಕಛೇರಿ ಪತ್ರ ಸಂಖ್ಯೆ: ಸಿಬ್ಬಂದಿ-6/66/2009-10, ದಿನಾಂಕ 06-02-2010 ಮತ್ತು 08-10-2010.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರಗಳಲ್ಲಿ ಕುಮಾರಿ ಗೌರವ್ವ ಎಸ್. ಗಡಕೇರಿ, ದ್ವಿದಸ, ಡಿಪಿಓ, ಬೆಳಗಾವಿ ರವರು ದಿನಾಂಕ 24-10-2005 ರಂದು ಅನುಕಂಪದ ಆಧಾರದ ಮೇಲೆ ಸೇವೆಗೆ ಸೇರಿದ್ದು, 2 ವರ್ಷಗಳ ಪರಿವೀಕ್ಷಣಾ ಅವಧಿಯಲ್ಲಿ ನಿಗಧಿಪಡಿಸಿರುವ ಅಕೌಂಟ್ಸ್ ಲೋಯರ್, ಪೊಲೀಸ್ ಮ್ಯಾನ್ಯುಯಲ್ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿರುತ್ತಾರೆ. ಮತ್ತು ಅವರಿಗೆ ಕನ್ನಡ ಭಾಷಾ ಪರೀಕ್ಷೆಯನ್ನು ತೆಗೆದುಕೊಳ್ಳುವುದರಿಂದ ವಿನಾಯಿತಿ ನೀಡಲಾಗಿರುತ್ತದೆ. ಆದರೆ, ಅವರ 2007-08ನೇ ಸಾಲಿನ ರಹಸ್ಯ ವರದಿಗಳಲ್ಲಿ ಪ್ರತಿಕೂಲ ಷರಾಗಳು ಇದ್ದುದರಿಂದ ಅವರ ಪರಿವೀಕ್ಷಣಾ ಅವಧಿಯನ್ನು ಕ.ನಾ.ಸೇ. (ಪರಿವೀಕ್ಷಣಾ) ನಿಯಮಗಳು, 1977ರ ನಿಯಮ 4(2) ರನ್ವಯ ದಿನಾಂಕ 24-10-2007 ರಿಂದ 23-10-2008 ರವರೆಗೆ ವಿಸ್ತರಿಸಲಾಗಿದ್ದು, ಈ ಅವಧಿ ಪೂರ್ಣಗೊಳ್ಳುವ ಪೂರ್ವದಲ್ಲಿ ಅವರ ವಾರ್ಷಿಕ ಬಡ್ತಿಯನ್ನು ಮುಂಬರುವ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಒಂದು ವರ್ಷಗಳ ಕಾಲ ಮುಂದೂಡುವ ಶಿಕ್ಷೆಯನ್ನು ವಿಧಿಸಲಾಗಿದೆ.

ಸದರಿಯವರ ಕಾರ್ಯನಿರ್ವಹಣಾ ವರದಿಯ ಅನುಸಾರ ಅವರ ಸೇವೆ ತೃಪ್ತಿಕರವಾಗಿಲ್ಲವೆಂದು ಕಂಡು ಬಂದಿದ್ದರೂ ಇತ್ತೀಚೆಗೆ ಅವರ ಕರ್ತವ್ಯ ನಿರ್ವಹಣೆಯಲ್ಲಿ ಸುಧಾರಣೆಯಾಗಿರುವುದೆಂದು ಎಸ್.ಪಿ. ಬೆಳಗಾವಿ ರವರು ವರದಿ ನೀಡಿರುವುದರಿಂದ ಹಾಗೂ ಅವರು ಅಂಗವಿಕಲರಾಗಿದ್ದು, ಕುಟುಂಬದ ಸದಸ್ಯರು ಅವರ ಮೇಲೆ ಅವಲಂಬಿತರಾಗಿರುವುದರಿಂದ ಅವರಿಗೆ ಮತ್ತೊಂದು ಅವಕಾಶವನ್ನು ಕೊಡುವುದು ಸೂಕ್ತವಾಗಿರುತ್ತದೆ ಎಂದು ಮತ್ತು ಸದರಿಯವರ ಪರಿವೀಕ್ಷಣಾ ಅವಧಿಯನ್ನು ಕ.ನಾ.ಸೇ. (ಪರಿವೀಕ್ಷಣಾ) ನಿಯಮಗಳು 1977 ರ ನಿಯಮ 4(1)(೧)ರನ್ವಯ ದಿನಾಂಕ 24-10-2008 ರಿಂದ 23-10-2009 (ಶಿಕ್ಷಾ ಅವಧಿ ಪೂರ್ಣಗೊಳ್ಳುವ ಅವಧಿ) ರವರೆಗೆ ವಿಸ್ತರಿಸುವಂತೆ ಡಿಜಿ ಮತ್ತು ಐಜಿಪಿ ರವರ ಪತ್ರ ದಿನಾಂಕ 06-02-2010ರಲ್ಲಿ ಕೋರಲಾಗಿರುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 24 ಪೊಸಿಲಿ 2010, ಬೆಂಗಳೂರು, ದಿನಾಂಕ: 17-01-2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಪರಿಗಣಿಸಿ ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ಪ್ರೊಬೇಷನರಿ) ನಿಯಮಾವಳಿಗಳು, 1977ರ ನಿಯಮ 4(1)(i) ರನ್ವಯ ಕುಮಾರಿ ಗೌರವ್ವ ಎಸ್. ಗಡಕೇರಿ, ದ್ವಿದಸ, ಡಿಪಿಓ, ಬೆಳಗಾವಿ ರವರ ಪರೀಕ್ಷಾರ್ಥ ಅವಧಿಯನ್ನು ದಿನಾಂಕ 24-10-2008 ರಿಂದ 23-10-2009 ರವರೆಗೆ ವಿಸ್ತರಿಸಿ ಸರ್ಕಾರವು ಆದೇಶಿಸಿದೆ.

ವಿಸ್ತರಿಸಿದ ಪರಿವೀಕ್ಷಣ ಅವಧಿಗೆ ಕ.ನಾ.ಸೇ (ಪರಿವೀಕ್ಷಣೆ) ನಿಯಮಗಳು 1977ರ ನಿಯಮ 10ರ ಪ್ರಕಾರ ವಾರ್ಷಿಕ ವೇತನ ಬಡ್ತಿಗಳನ್ನು ನೀಡುವಂತಿಲ್ಲ. ಕಾಲ್ಪನಿಕವಾಗಿ ವಾರ್ಷಿಕ ವೇತನ ಬಡ್ತಿಗಳನ್ನು ಬಿಡುಗಡೆ ಮಾಡಿ ವೇತನವನ್ನು ನಿಗದಿಪಡಿಸುವುದು. ಹೀಗೆ ನಿಗದಿಪಡಿಸಿದ ವೇತನದ ಬಾಕಿಯನ್ನು ನೀಡಲು ಅವಕಾಶವಿರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ. ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. ನಂ. 279

## ಒಳಾಡಳಿತ ಸಚಿವಾಲಯ

**ವಿಷಯ** : ಶ್ರೀ ಆಂಜನೇಯ, ಪಿ.ಎಸ್.ಐ. (ಸೇವಾನಿರತ) ಇವರ ಪರಿವೀಕ್ಷಣಾ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ** : ಡಿಜಿ ಮತ್ತು ಐಜಿಪಿ ರವರ ಪತ್ರ ಸಂಖ್ಯೆ: 95/ಸಿಬ್ಬಂದಿ-1/2008-09, ದಿನಾಂಕ 06-10-2009.

***

**ಪ್ರಸ್ತಾವನೆ :**

ಶ್ರೀ ಆಂಜನೇಯ, ಪಿ.ಎಸ್.ಐ. (ಸೇವಾನಿರತ) ರವರು ಪೊಲೀಸ್ ಇಲಾಖೆಯಲ್ಲಿ ಸೇವಾನಿರತ ಪಿ.ಎಸ್.ಐ. ಆಗಿ ನೇಮಕಾತಿ ಹೊಂದಿ, ದಿನಾಂಕ 30-12-2001 ರಂದು ಕರ್ತವ್ಯಕ್ಕೆ ವರದಿ ಮಾಡಿರುತ್ತಾರೆ. ಇವರು 2½ ವರ್ಷಗಳ ಪರಿವೀಕ್ಷಣಾ ಅವಧಿಯನ್ನು ದಿನಾಂಕ 30-06-2004 ರಂದು ಪೂರ್ಣಗೊಳಿಸಿದರೂ ಸದರಿ ಅವಧಿಯಲ್ಲಿ ಇವರ ಸೇವೆಯು ಅತೃಪ್ತಿಕರವಾಗಿದ್ದರಿಂದ ಮತ್ತು ಅಕೌಂಟ್ಸ್ ಹೈಯರ್ ಇಲಾಖಾ ಪರೀಕ್ಷೆಯಲ್ಲಿ ಉತ್ತೀರ್ಣರಾಗದೇ ಇದ್ದುದರಿಂದ ಇವರ ಪರಿವೀಕ್ಷಣಾ ಅವಧಿಯನ್ನು ನೇಮಕಾತಿ ಪ್ರಾಧಿಕಾರವಾದ ಐ.ಜಿ.ಪಿ. ಪಶ್ಚಿಮ ವಲಯ ಇವರು ದಿನಾಂಕ 01-07-2004 ರಿಂದ 30-09-2005 ರವರೆಗೆ 1 ವರ್ಷ 3 ತಿಂಗಳ ಕಾಲ ವಿಸ್ತರಿಸಿ ದಿನಾಂಕ 26-12-2008 ರಂದು ಆದೇಶ ಹೊರಡಿಸಿರುತ್ತಾರೆ. ಸದರಿ

ಪಿ.ಎಸ್.ಐ. ರವರು ಅಕೌಂಟ್ಸ್ ಹೈಯರ್ ಪರೀಕ್ಷೆಯಲ್ಲಿ ದಿನಾಂಕ 04-02-2009 ರಂದು ಉತ್ತೀರ್ಣರಾಗಿರುತ್ತಾರೆ ಎಂದು ಮೇಲೆ ಓದಲಾದ ಡಿ.ಜಿ.ಪಿ.ರವರ ಪತ್ರದಲ್ಲಿ ವಿಷದಪಡಿಸಿರುತ್ತಾರೆ.

ಇವರ ವಿರುದ್ಧ ಕಾರವಾರ ಲೋಕಾಯುಕ್ತ ಠಾಣೆಯಲ್ಲಿ ಮೊ.ಸಂ. 01/2007 ಕಲಂ 7, 13(1)(ಡಿ) ಜೊತೆ 13(2) ಲಂಚ ನಿರೋಧ ಕಾಯ್ದೆ 1988 ರ ಅಡಿಯಲ್ಲಿ ಪ್ರಕರಣ ದಾಖಲಾಗಿ ವಿಚಾರಣೆಯಲ್ಲಿರುತ್ತದೆ. ಅಲ್ಲದೆ, ಸರ್ಕಾರದ ಆದೇಶ ಸಂಖ್ಯೆ: ಒಇ/225/ಪೊಸಇ/2008, ದಿನಾಂಕ 09-01-2009ರಲ್ಲಿ ಜಂಟಿ ಇಲಾಖಾ ವಿಚಾರಣೆಯಲ್ಲಿ ಈ ಕೆಳಕಂಡಂತೆ ಅದೇಶಿಸಿದೆ.

"ಶ್ರೀ ಚಂದ್ರಕಾಂತ ಕೃಷ್ಣಾನಾಯ್ಕ, ಸಿಹೆಚ್‌ಸಿ-341 ರವರನ್ನು ದೋಷಮುಕ್ತಗೊಳಿಸಲಾಗಿದೆ. ಮುಂದುವರಿದು ಶ್ರೀ ಎನ್. ಆಂಜನೇಯ, ಪಿ.ಎಸ್.ಐ. ಇವರ ವಿರುದ್ಧದ ಆರೋಪಗಳು ಸಾಬೀತಾಗಿರುವುದರಿಂದ ಇವರಿಗೆ ಕರ್ನಾಟಕ ಪೊಲೀಸ್ ಕಾಯ್ದೆ, 1963ರ ಕಲಂ 23(1)(ಬಿ)(i) ರನ್ವಯ ಇವರ ವೇತನವನ್ನು ಇವರ ಹುದ್ದೆಯ ವೇತನ ಶ್ರೇಣಿಯ ಕನಿಷ್ಠ ವೇತನ ಹಂತಕ್ಕೆ ಎರಡು ವರ್ಷಗಳ ಕಾಲ ಸಂಚಿತ ಪರಿಣಾಮ ರಹಿತವಾಗಿ ತಡೆಹಿಡಿಯುವ ದಂಡನೆಯ್ನು ವಿಧಿಸಿ ಆದೇಶಿಸಿದೆ."

ಮುಂದುವರೆದು ಸದರಿ ಅಧಿಕಾರಿಯು ಕರ್ನಾಟಕ ನಾಗರೀಕ ಸೇವಾ (ಪ್ರೊಬೇಷನರಿ) ನಿಯಮಗಳು, 1977ರ ನಿಯಮ 4 ಮತ್ತು 5 (1)ರನ್ವಯ ಅವರು ಹೊಂದಿರುವ ಪಿ.ಎಸ್.ಐ. ಹುದ್ದೆಯ ಕಾರ್ಯಭಾರವನ್ನು ನಿರ್ವಹಿಸಲು ಸಮರ್ಥರಾಗಿರುತ್ತಾರೆ ಎಂದು ಹಾಗೂ ಇವರ ಖಾಯಂ ಪೂರ್ವ ಅವಧಿಯನ್ನು ದಿನಾಂಕ 30-09-2005 ರಿಂದ 29-09-2010 ರವರೆಗೆ ಅಥವಾ ದಂಡನಾ ಆದೇಶವು ಜಾರಿಯಲ್ಲಿರುವವರೆಗೆ ಕೆ.ಸಿ.ಎಸ್. (ಪ್ರೊಬೇಷನ್) ನಿಯಮಾವಳಿ, 1977ರ ನಿಯಮ 4(1)(i) ರನ್ವಯ ವಿಸ್ತರಿಸುವಂತೆ ಮೇಲೆ ಓದಲಾದ ಪತ್ರದಲ್ಲಿ ಡಿಜಿ ಮತ್ತು ಐಜಿಪಿ ರವರು ಕೋರಿರುತ್ತಾರೆ

**ಸರ್ಕಾರಿ ಆದೇಶ ಸಂಖ್ಯೆ: ಒಇ 363 ಪೊಸಇ 2010, ಬೆಂಗಳೂರು, ದಿನಾಂಕ: 14-01-2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಪರಿಶೀಲಿಸಿ ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ಪ್ರೊಬೇಷನರಿ) ನಿಯಮಾವಳಿಗಳು, 1977ರ ನಿಯಮ 4(1)(i) ರನ್ವಯ ಶ್ರೀ ಆಂಜನೇಯ, ಪಿ.ಎಸ್.ಐ. (ಸೇವಾನಿರತ), ರವರ ಪರಿವೀಕ್ಷಣಾ ಅವಧಿಯನ್ನು ದಿನಾಂಕ 30-09-2005 ರಿಂದ 31-12-2010 ರವರೆಗೆ ವಿಸ್ತರಿಸಿ ಸರ್ಕಾರವು ಆದೇಶಿಸಿದೆ.

ವಿಸ್ತರಿಸಿದ ಪರಿವೀಕ್ಷಣ ಅವಧಿಗೆ ಕ.ನಾ.ಸೇ (ಪರಿವೀಕ್ಷಣೆ) ನಿಯಮಗಳು 1977ರ ನಿಯಮ 10ರ ಪ್ರಕಾರ ವಾರ್ಷಿಕ ವೇತನ ಬಡ್ತಿಗಳನ್ನು ನೀಡುವಂತಿಲ್ಲ. ಕಾಲ್ಪನಿಕವಾಗಿ ವಾರ್ಷಿಕ ವೇತನ ಬಡ್ತಿಗಳನ್ನು ಬಿಡುಗಡೆ ಮಾಡಿ ವೇತನವನ್ನು ನಿಗಧಿಪಡಿಸುವುದು. ಹೀಗೆ ನಿಗಧಿಪಡಿಸಿದ ವೇತನದ ಬಾಕಿಯನ್ನು ನೀಡಲು ಅವಕಾಶವಿರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ. ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. ನಂ. 280

## ಕಂದಾಯ ಸಚಿವಾಲಯ

**ವಿಷಯ** : ಶ್ರೀ ಜಿ. ಶಿವರಾಜ, ವಿಶೇಷ ತಹಶೀಲ್ದಾರ್, ನಿಡಗುಂದಿ, ಬಿಜಾಪುರ ಜಿಲ್ಲೆ (ಪ್ರಸ್ತುತ ನಿವೃತ್ತ) ಇವರ ವಿರುದ್ಧ ಶಿಸ್ತು ಕ್ರಮ ಕುರಿತು ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ** :
1) ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 06 ಎಟಿಎಸ್ 2003, ದಿನಾಂಕ 22-5-2003
2) ಸರ್ಕಾರದ ಆದೇಶ ಸಂಖ್ಯೆ: ಕಂಇ 39 ಎಡಿಇ 2003, ದಿನಾಂಕ 29-8-2003
3) ಜಿಲ್ಲಾಧಿಕಾರಿಗಳು, ವಿಜಾಪುರ ಜಿಲ್ಲೆ ಇವರ ಪತ್ರ ಸಂಖ್ಯೆ: ಕವಿ/ಸಿಬ್ಬಂದಿ/1/ವಿವ/167/2003-04, ದಿನಾಂಕ 28-1-2004.
4) ಸರ್ಕಾರದ ಆದೇಶ ಸಂಖ್ಯೆ: ಕಂಇ 39 ಎಡಿಇ 2003, ದಿನಾಂಕ 14-5-2004
5) ಸರ್ಕಾರದ ಕಾರಣ ಕೇಳುವ ನೋಟೀಸು ಸಂಖ್ಯೆ: ಕಂಇ 39 ಎಡಿಇ 2003,ದಿನಾಂಕ 12-10-2004
6) ಶ್ರೀ ಜಿ. ಶಿವರಾಜ, ವಿಶೇಷ ತಹಶೀಲ್ದಾರ್ ಇವರ ಲಿಖಿತ ಹೇಳಿಕೆ ದಿನಾಂಕ 15-2-2010
7) ಜಿಲ್ಲಾಧಿಕಾರಿಗಳು, ಬಿಜಾಪುರ ಇವರ ಪತ್ರ ಸಂಖ್ಯೆ: ಕವಿ/ಸಿಬ್ಬಂದಿ/1/ವಿವ/167/2003-04, ದಿನಾಂಕ 28-7-2010.

***

**ಪ್ರಸ್ತಾವನೆ :**

ಕಂದಾಯ ಇಲಾಖೆಯಲ್ಲಿ ನೇಮಕಾತಿ ನಿರೀಕ್ಷಣೆಯಲಿದ್ದ ಶ್ರೀ ಬಿ. ಶಿವರಾಜ್ ಇವರನ್ನು ಬಿಜಾಪುರ ಜಿಲ್ಲೆ ವಿಶೇಷ ತಹಶೀಲ್ದಾರ್, ನಿಡಗುಂದಿ ಇಲ್ಲಿಗೆ ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ಸರ್ಕಾರದ ಅಧಿಸೂಚನೆ ದಿನಾಂಕ 22-05-03ರಲ್ಲಿ ನೇಮಿಸಲಾಗಿತ್ತು. ಆದರೆ ಸದರಿ ಅಧಿಕಾರಿಗಳು ಸ್ಥಳನಿಯುಕ್ತಿಗೊಳಿಸಿ ನೇಮಿಸಲಾಗಿದ್ದ ಹುದ್ದೆಯಲ್ಲಿ ಸುಮಾರು ಮೂರು ತಿಂಗಳು ಕಳೆದರೂ ಸಹ ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲ ಹಾಗೂ ಅಂತಹ ಗೈರು ಹಾಜರಾತಿಗೆ ಸಕಾರಣಳನ್ನೊಳಗೊಂಡ ಯಾವುದೇ ಅರ್ಜಿಯನ್ನು ಸಲ್ಲಿಸದೇ ಅನಧಿಕೃತವಾಗಿ ಗೈರು ಹಾಜರಾಗಿ ಕರ್ತವ್ಯ ಲೋಪ ಎಸಗಿರುವುದು ಸರ್ಕಾರದ ಗಮನಕ್ಕೆ ಬಂದಿದ್ದರಿಂದ 1966ರ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿಗಳ ನಿಯಮ 3ನ್ನು ಉಲ್ಲಂಘಿಸಿರುವುದು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ ಅವರ ವಿರುದ್ಧ ಇಲಾಖಾ ವಿಚಾರಣೆ ಹೂಡುವುದನ್ನು ಕಾಯ್ದಿರಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅವರನ್ನು ಮೇಲೆ ಓದಲಾದ ಕ್ರಮ ಸಂಖ್ಯೆ: (2)ರ ದಿನಾಂಕ 29-8-2003ರ ಆದೇಶದಲ್ಲಿ ಸೇವೆಯಿಂದ ಅಮಾನತ್ತುಗೊಳಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ: (3)ರಲ್ಲಿ ಬಿಜಾಪುರ ಜಿಲ್ಲಾಧಿಕಾರಿಗಳ ದಿನಾಂಕ 28-1-2004ರ ಪತ್ರದಲ್ಲಿ ಶ್ರೀ ಜಿ. ಶಿವರಾಜ, ವಿಶೇಷ ತಹಶೀಲ್ದಾರ್ ಇವರು ದಿನಾಂಕ 14-08-2003ರ ಅರ್ಜಿಯನ್ವಯ ಮತ್ತು ದಿನಾಂಕ 22-5-2003ರ ಅಧಿಸೂಚನೆ ಮೇರೆಗೆ ದಿನಾಂಕ 14-8-2003 ರಂದು ಪೂರ್ವಾಹ್ನ ವಿಶೇಷ ತಹಶೀಲ್ದಾರ್ ನಿಡಗುಂದಿಗೆ ಹಾಜರಾಗುತ್ತಿದ್ದು ಹಾಜರಾಗಲು ಅನುಮತಿ ನೀಡಲು ಕೋರಿದ್ದರು. ಅವರು ಜಿಲ್ಲಾಧಿಕಾರಿಗಳಿಗೆ ಭೇಟಿಯಾಗಿ ಹಾಜರಾತಿಗೆ ಅನುಮತಿ ಪಡೆದುಕೊಳ್ಳದೇ ಕೇವಲ ವರದಿ ಸಲ್ಲಿಸಿ ಹೋಗಿದ್ದಾರೆ. ಅವರು ಜಿಲ್ಲಾಧಿಕಾರಿಗಳನ್ನು ಕಂಡು ಅನುಮತಿ ಪಡೆದು

ಚಾರ್ಜ್ ತೆಗೆದುಕೊಂಡ ಬಗ್ಗೆ ಸಿಟಿಸಿಯನ್ನು ಜಿಲ್ಲಾಧಿಕಾರಿಗಳ ಕಛೇರಿಗೆ ಸಲ್ಲಿಸಬೇಕಾಗಿತ್ತು ಆದರೆ ಹಾಗೆ ಮಾಡಿರುವುದಿಲ್ಲ ಹಾಗೂ ಅವರು ಕರ್ತವ್ಯ ನಿರ್ವಹಿಸುತ್ತಿರುವುದೂ ಸಹ ತಿಳಿದು ಬಂದಿರುವುದಿಲ್ಲ ಅನಂತರ ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 39 ಎಡಿಇ 2003 ದಿನಾಂಕ 29-8-2003 ರನ್ವಯ ಅವರನ್ನು ಸೇವೆಯಿಂದ ಅಮಾನತ್ತುಗೊಳಿಸಿ ಆದೇಶಿಸಲಾಗಿದೆ. ಇದನ್ನು ಅರಿತು ಅವರು ಅಮಾನತ್ತು ಆದೇಶ ತಲುಪುವ ಮೊದಲೇ ದಿನಾಂಕ 14-8-2003 ರಂದು ವಿಶೇಷ ತಹಶೀಲ್ದಾರ್ ನಿಡಗುಂದಿ ಹುದ್ದೆಯ ಪ್ರಭಾರ ವಹಿಸಿಕೊಂಡಿರುವುದಾಗಿ ಸಿಟಿಸಿಯನ್ನು ರುಜು ಮಾಡಿ ಕಳುಹಿಸಿರುತ್ತಾರೆ. ಈ ಸಿಟಿಸಿಯ ಪ್ರತಿಯು ಜಿಲ್ಲಾಧಿಕಾರಿಗಳ ಕಛೇರಿಯಲ್ಲಿ ದಿನಾಂಕ 10-9-2003 ರಂದು ಸ್ವೀಕೃತವಾಗಿರುತ್ತದೆ. ಅಂದರೆ ಅವರು ತಾವು ಈ ಮೊದಲೇ ಪ್ರಭಾರ ವಹಿಸಿಕೊಂಡಿರುವುದಾಗಿ ನಿರೂಪಿಸಲು ದಿನಾಂಕ 29-8-2003 ರಂದು ತಮ್ಮನ್ನು ಅಮಾನತ್ತಿನಲ್ಲಿದ್ದಾರೆಂಬ ವಿಷಯ ಗೊತ್ತಾಗಿ ಈ ತರಹ ಮಾಡಿರುವುದು ಮೇಲ್ನೋಟಕ್ಕೆ ಸ್ಪಷ್ಟವಾಗುತ್ತದೆ. ಮುಂದುವರೆಯುತ್ತಾ ಅವರು ಈವರೆಗೂ ಜಿಲ್ಲಾಧಿಕಾರಿಗಳಿಗೆ ಭೇಟಿಯಾಗಿ ವಿಷಯವನ್ನು ಚರ್ಚಿಸದೇ ಇರುವುದರಿಂದ ತಹಶೀಲ್ದಾರ್ ಬಸವನ ಬಾಗೇವಾಡಿ ಇವರನ್ನು ವರದಿ ಕೇಳಲಾಗಿ ಅವರು ದಿನಾಂಕ 23-12-2003 ರಂದು ಸಲ್ಲಿಸಿರುವ ವರದಿಯಲ್ಲಿ ಅವರು ವಿಶೇಷ ತಹಶೀಲ್ದಾರ್, ನಿಡಗುಂದಿ ಇವರ ಕಛೇರಿ ಸ್ಥಾಪನೆ ಹಾಗೂ ಕಾರ್ಯದ ಬಗ್ಗೆ ತಮ್ಮೊಂದಿಗೆ ಚರ್ಚಿಸಿರುವುದಿಲ್ಲ ಹಾಗೂ ಭೇಟಿ ಸಹ ಆಗಿರುವುದಿಲ್ಲ ಮತ್ತು ಅವರು ಕರ್ತವ್ಯ ನಿರ್ವಹಿಸಿದ ಬಗ್ಗೆ ದಿನಚರಿಯನ್ನು ಸಹ ಸಲ್ಲಿಸಿರುವುದಿಲ್ಲ ಎಂದು ತಿಳಿಸಿರುತ್ತಾರೆ. ಸದರಿ ಅಧಿಕಾರಿಯವರು ಈವತ್ತಿನವರೆಗೂ ಜಿಲ್ಲಾಧಿಕಾರಿಗಳನ್ನು ಭೇಟಿಯಾಗಿರುವುದಿಲ್ಲ ಹಾಗೂ ಹಾಜರಾಗಿ ಕರ್ತವ್ಯ ನಿರ್ವಹಿಸುತ್ತಿರುವ ಬಗ್ಗೆ ವರದಿ ಹಾಗೂ ದಿನಚರಿಯನ್ನು ಸಲ್ಲಿಸಿರುವುದಿಲ್ಲ ಮತ್ತು ಅವರು ಕಾರ್ಯಾಲಯಕ್ಕೆ ಹಾಜರಾಗಿ ಅವರ ವೇತನ ಬಗ್ಗೆ ಹಾಗೂ ಅಂತಿಮ ವೇತನ ಪಟ್ಟಿ ಬರುವ ಬಗ್ಗೆ ಹಾಗೂ ಸೇವಾ ಪುಸ್ತಕ ಕುರಿತು ಯಾವುದನ್ನು ವಿಚಾರಿಸಿರುವುದಿಲ್ಲ. ಮುಖ್ಯವಾಗಿ ಅವರು ಜಿಲ್ಲಾಧಿಕಾರಿಗಳಿಗೆ ಭೇಟಿಯಾಗಿ ಅವರು ಕಛೇರಿ ಸ್ಥಾಪನೆ ಹಾಗೂ ಕಾರ್ಯದ ಬಗ್ಗೆ ಬೇಕಾಗುವ ಅವಶ್ಯಕ ಸಾಮಗ್ರಿಗಳ ಹಾಗೂ ಸಿಬ್ಬಂದಿ ಕೊಡುವ ಕುರಿತು ಯಾವುದನ್ನು ಚರ್ಚಿಸಿರುವುದಿಲ್ಲ. ಕಾರ್ಯಾಲಯದಲ್ಲಿನ ಅಧಿಕಾರಿಗಳಿಗೂ ಸಹ ಭೇಟಿಯಾಗಿ ಸಲಹೆಗಳನ್ನು ಪಡೆದಿರುವುದಿಲ್ಲ ಇದರಿಂದಾಗಿ ಅವರು ಕರ್ತವ್ಯ ನಿರ್ವಹಿಸಿದ್ದಾರೆ ಅನ್ನುವ ಕುರಿತು ಯಾವುದೇ ಪೂರಕ ದಾಖಲೆಗಳು ಇರುವುದಿಲ್ಲ ಹಾಗೂ ನಿರ್ದಿಷ್ಟವಾಗಿ ಹೇಳಲು ಬರಲಾರದು. ಈ ಎಲ್ಲಾ ಅಂಶಗಳ ಮೇಲಿಂದ ಅವರು ವಿಶೇಷ ತಹಶೀಲ್ದಾರ್ ಅಂತಾ ಹಾಜರಾತಿಯನ್ನು ಪರಿಗಣಿಸಿರುವುದಿಲ್ಲ ಎಂಬ ಅಭಿಪ್ರಾಯ ಪಟ್ಟು ವರದಿ ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಸರ್ಕಾರದ ದಿನಾಂಕ 14-5-2004ರ ಆದೇಶದಲ್ಲಿ 1957ರ ಕ.ನಾ.ಸೇ. (ವ.ನಿ&ಮೇ) ನಿಯಮಾವಳಿಗಳ ನಿಯಮ 10(5)(ಸಿ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಜಿ. ಶಿವರಾಜ್ ಇವರ ವಿರುದ್ಧದ ಇಲಾಖಾ ವಿಚಾರಣೆಯನ್ನು ಬಾಕಿ ಇಟ್ಟು ತಕ್ಷಣದಿಂದಲೇ ಜಾರಿಗೆ ಬರುವಂತೆ ಅವರ ಅಮಾನತ್ತಿನ ಆದೇಶವನ್ನು ರದ್ದುಪಡಿಸಿ ಅವರನ್ನು ಮುಂದಿನ ಆದೇಶದವರೆಗೆ ವಿಶೇಷ ಭೂಸ್ವಾಧೀನಾಧಿಕಾರಿಗಳ ಕಛೇರಿ, ಕೃಷ್ಣಾ ಮೇಲ್ದಂಡೆ ಯೋಜನೆ, ಆಲಮಟ್ಟಿ ಕಛೇರಿಯಲ್ಲಿನ ವಿಶೇಷ ತಹಶೀಲ್ದಾರ್ ಹುದ್ದೆಗೆ ನೇಮಿಸಿ ಆದೇಶಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ: (5) ದಿನಾಂಕ 12-10-2004ರ ಸರ್ಕಾರದ ಕಾರಣ ಕೇಳುವ ನೋಟೀಸಿನೊಂದಿಗೆ ಶ್ರೀ ಜಿ. ಶಿವರಾಜ್ ಇವರ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳಲು ದೋಷಾರೋಪಣಾ ಪಟ್ಟಿಯನ್ನು ದಿನಾಂಕ 12-10-2004 ರಂದು ಕಳುಹಿಸಲಾಗಿತ್ತು. ಆದರೆ ಈ ಅಧಿಕಾರಿಯ ವಿವರಗಳು ಇಲ್ಲದೇ ಇರುವುದರಿಂದ ಅವರಿಗೆ ದೋಷಾರೋಪಣಾ ಪಟ್ಟಿ ಜಾರಿಯಾಗಿಲ್ಲವೆಂದು ಜಿಲ್ಲಾಧಿಕಾರಿಗಳು ತಿಳಿಸಿರುತ್ತಾರೆ. ಸದರಿ ಅಧಿಕಾರಿಯು ದಿನಾಂಕ 28-2-2006 ರಂದು ವೈಯೋ ನಿವೃತ್ತರಾಗಿದ್ದು ನಂತರ ಈ ಅಧಿಕಾರಿಯು ದಿನಾಂಕ 11-02-2010 ರಂದು ಸಚಿವಾಲಯಕ್ಕೆ ಹಾಜರಾಗಿ ದೋಷಾರೋಪಣಾ ಪಟ್ಟಿಯನ್ನು ಸ್ವೀಕರಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (6)ರಲ್ಲಿ ಶ್ರೀ ಜಿ. ಶಿವರಾಜ್, ನಿವೃತ್ತ ವಿಶೇಷ ತಹಶೀಲ್ದಾರ್‌ರವರು ದಿನಾಂಕ 15-2-2010 ರಂದು ಸರ್ಕಾರದ ಕಾರಣಕೇಳುವ ನೋಟೀಸಿಗೆ ತಮ್ಮ ಲಿಖಿತ ಉತ್ತರವನ್ನು ಸಲ್ಲಿಸಿರುತ್ತಾರೆ. ಸದರಿ ಲಿಖಿತ ಹೇಳಿಕೆಯಲ್ಲಿ ನೋಟೀಸಿನ ಅನುಬಂಧ 1 ರಿಂದ 4 ರವರೆಗಿನ ಅನುಬಂಧಗಳಲ್ಲಿನ ತಮ್ಮ ವಿರುದ್ಧದ ಆರೋಪಿಸಿದ ವಿಷಯಗಳು ನಿಶ್ಚಿತವಾಗಿ ಅಲ್ಲಗಳೆದು ಕಾರಣ ಕೇಳುವ ನೋಟೀಸನ್ನು ಸ್ಥಗಿತಗೊಳಿಸಬೇಕೆಂದು ಕೋರಿರುತ್ತಾರೆ.

ಸರ್ಕಾರದ ದಿನಾಂಕ 12-10-2004ರ ಕಾರಣ ಕೇಳುವ ನೋಟೀಸಿಗೆ ಶ್ರೀ ಜಿ. ಶಿವರಾಜ್, ನಿವೃತ್ತ ವಿಶೇಷ ತಹಶೀಲ್ದಾರ್ ರವರು ಸಲ್ಲಿಸಿರುವ ದಿನಾಂಕ 15-2-2010ರ ಲಿಖಿತ ಉತ್ತರದ ಪ್ರತಿಯನ್ನು ಬಿಜಾಪುರ ಜಿಲ್ಲಾಧಿಕಾರಿಗಳಿಗೆ ದಿನಾಂಕ 26-2-2010 ರಂದು ಕಳುಹಿಸಿ, ವಿಷಯದ ಬಗ್ಗೆ ತಮ್ಮ ಅಭಿಪ್ರಾಯ/ವರದಿ ಕಳುಹಿಸುವಂತೆ ಕೋರಲಾಗಿತ್ತು. ಅದರಂತೆ ಮೇಲೆ ಒದಲಾದ ಕ್ರಮ ಸಂಖ್ಯೆ (7)ರ ಬಿಜಾಪುರ ಜಿಲ್ಲಾಧಿಕಾರಿಗಳ ದಿನಾಂಕ 28-7-2010ರ ಪತ್ರದಲ್ಲಿ ಶ್ರೀ ಜಿ. ಶಿವರಾಜ್, ನಿವೃತ್ತ ವಿಶೇಷ ತಹಶೀಲ್ದಾರ್ ಇವರು ಜಿಲ್ಲಾಧಿಕಾರಿಗಳಿಗೆ ಭೇಟಿಯಾಗಿ ವಿಷಯವನ್ನು ಚರ್ಚಿಸದೇ ಇರುವುದರಿಂದ ತಹಶೀಲ್ದಾರ್, ಬಸವನಬಾಗೇವಾಡಿ ಇವರಿಗೆ ವರದಿ ಕೇಳಲಾಗಿ ಅವರು ದಿನಾಂಕ 23-2-2003ರಲ್ಲಿ ಸಲ್ಲಿಸಿದ ವರದಿಯಲ್ಲಿ ಸದರಿ ವಿಶೇಷ ತಹಶೀಲ್ದಾರರು ಅವರ ಕಛೇರಿ ಸ್ಥಾಪನೆ ಹಾಗೂ ಕಾರ್ಯದ ಬಗ್ಗೆ ಭೇಟಿಯಾಗಿ ಯಾವುದನ್ನು ಚರ್ಚಿಸಿರುವುದಿಲ್ಲ ಮತ್ತು ಅವರು ಕರ್ತವ್ಯ ನಿರ್ವಹಿಸಿದ ಬಗ್ಗೆ ದಿನಚರಿಯನ್ನು ಸಹ ಸಲ್ಲಿಸಿರುವುದಿಲ್ಲ ಎಂದು ತಿಳಿಸಿ ಈ ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಅವರು ವಿಶೇಷ ತಹಶೀಲ್ದಾರ್, ನಿಡಗುಂದಿ ಅಂತಾ ಕರ್ತವ್ಯ ನಿರ್ವಹಿಸಿದ್ದಾರೆ ಅನ್ನುವ ಕುರಿತು ಯಾವುದೇ ಪೂರಕ ದಾಖಲೆಗಳು ಇರದೇ ಇರುವುದರಿಂದ ಅವರ ಹಾಜರಾತಿಯನ್ನು ಪರಿಗಣಿಸಿರುವುದಿಲ್ಲ ಎಂದು ಅಭಿಪ್ರಾಯ ನೀಡಿ ವರದಿ ಸಲ್ಲಿಸಿರುವ ಹಿನ್ನೆಲೆಯಲ್ಲಿ ಅವರು ಸರ್ಕಾರದ ಕಾರಣ ಕೇಳುವ ನೊಟೀಸಿಗೆ ದಿನಾಂಕ 15-2-2010 ರಂದು ಸರ್ಕಾರಕ್ಕೆ ನೀಡಿರುವ ಲಿಖಿತ ಹೇಳಿಕೆಯನ್ನು ಒಪ್ಪಲಾಗುವುದಿಲ್ಲವೆಂದು ಅಭಿಪ್ರಾಯ ನೀಡಿರುತ್ತಾರೆ.

ಪ್ರಕರಣದ ವಿವರಗಳನ್ನು ಪರಿಶೀಲಿಸಲಾಗಿ ಶ್ರೀ ಜಿ. ಶಿವರಾಜ್, ನಿವೃತ್ತ ತಹಶೀಲ್ದಾರ್, ಇವರು ಈ ಹಿಂದೆ ಬಿಜಾಪುರ ಜಿಲ್ಲೆ ವಿಶೇಷ ತಹಶೀಲ್ದಾರ್, ನಿಡಗುಂದಿ ಇಲ್ಲಿಗೆ ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 06 ಎಟಿಎಸ್ 03: ದಿನಾಂಕ 22-05-03ರಲ್ಲಿ ನೇಮಿಸಲಾಗಿತ್ತು. ಸದರಿ ಅಧಿಕಾರಿಗಳು ದಿನಾಂಕ 14-08-03 ರಂದು ವಿಶೇಷ ತಹಶೀಲ್ದಾರ್, ನಿಡಗುಂದಿ ಇಲ್ಲಿಗೆ ಹಾಜರಾಗುತ್ತಿದ್ದು ಅನುಮತಿ ನೀಡುವಂತೆ ಅರ್ಜಿ ಸಲ್ಲಿಸಿ ಜಿಲ್ಲಾಧಿಕಾರಿಗಳ ಅನುಮತಿ ಪಡೆದುಕೊಳ್ಳದೆ, ಕೇವಲ ವರದಿ ಸಲ್ಲಿಸಿ ಹೋಗಿದ್ದಾರೆಂದು ಹಾಗೂ ಸದರಿ ಹುದ್ದೆಯ ಚಾರ್ಜ್ ತೆಗೆದುಕೊಂಡ ಬಗ್ಗೆ ಸಿ.ಟಿ.ಸಿ.ಯನ್ನು ಸಲ್ಲಿಸದೆ ಇರುವುದರಿಂದ, ಅವರು ಕರ್ತವ್ಯ ನಿರ್ವಹಿಸಿರುವ ಬಗ್ಗೆ ಅನುಮಾನ ಉಂಟಾಗಿದೆಯೆಂದು ಸರ್ಕಾರಕ್ಕೆ ವರದಿ ಸಲ್ಲಿಸಿದರ ಮೇರೆಗೆ ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 39 ಎಡಿಇ 03 ದಿನಾಂಕ 29-08-03 ರಂದು ಅವರನ್ನು ಅಮಾನತ್ತುಗೊಳಿಸಲಾಗಿದೆ. ಈ ಅಮಾನತ್ತು ಆದೇಶ ಅವರಿಗೆ ತಲುಪುವ ಮೊದಲೇ ದಿನಾಂಕ 14-08-03 ರಂದು ವಿಶೇಷ ತಹಶೀಲ್ದಾರ್, ನಿಡಗುಂದಿ ಅಂತಾ ಪ್ರಭಾರವಹಿಸಿಕೊಂಡಿರುವುದಾಗಿ ಸಿ.ಟಿ.ಸಿ.ಯನ್ನು ರುಜು ಮಾಡಿ ಕಳುಹಿಸಿರುತ್ತಾರೆ. ಈ ಸಿ.ಟಿ.ಸಿ.ಗೆ ಜಿಲ್ಲಾಧಿಕಾರಿಗಳ ಕಾರ್ಯಾಲಯದಲ್ಲಿ ದಿನಾಂಕ 10-09-03 ರಂದು ಸ್ವೀಕೃತವಾಗಿದ್ದು ಇವರು ತಾವು

ಮೊದಲೇ ಪ್ರಭಾರವಹಿಸಿಕೊಂಡಿರುವುದಾಗಿ ನಿರೂಪಿಸಲು ದಿನಾಂಕ 29–08–03 ರಂದು ತಮ್ಮನ್ನು ಅಮಾನತ್ತಿನಲ್ಲಿ ಇಟ್ಟಿದ್ದಾರೆ ಎಂಬ ವಿಷಯ ಗೊತ್ತಾಗಿ ಈ ರೀತಿ ಮಾಡಿರುವುದು ಮೇಲ್ನೋಟಕ್ಕೆ ಸ್ಪಷ್ಟವಾಗಿರುತ್ತದೆ ಎಂದು ಜಿಲ್ಲಾಧಿಕಾರಿಗಳು ತಿಳಿಸಿದ್ದರು.

ಈ ಮೇಲಿನ ಜಿಲ್ಲಾಧಿಕಾರಿಗಳ ವರದಿ ಆಧಾರದ ಮೇಲೆ ಶ್ರೀ ಜಿ. ಶಿವರಾಜ್, ಇವರ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳಲು ದೋಷಾರೋಪಣಾ ಪಟ್ಟಿಯನ್ನು ದಿನಾಂಕ 12–10–04 ರಂದು ಕಳುಹಿಸಲಾಗಿತ್ತು. ಆದರೆ ಈ ಅಧಿಕಾರಿಯ ವಿವರಗಳು ಇಲ್ಲದೇ ಇರುವುದರಿಂದ ಅವರಿಗೆ ದೋಷಾರೋಪಣಾ ಪಟ್ಟಿ ಜಾರಿಯಾಗಿಲ್ಲವೆಂದು ಜಿಲ್ಲಾಧಿಕಾರಿಗಳು ತಿಳಿಸಿರುತ್ತಾರೆ. ನಂತರ ಈ ಅಧಿಕಾರಿಗೆ ದಿನಾಂಕ 11–02–2010 ರಂದು ಸಚಿವಾಲಯಕ್ಕೆ ಹಾಜರಾಗಿ ದೋಷಾರೋಪಣ ಪಟ್ಟಿಯನ್ನು ಸ್ವೀಕರಿಸಿರುವುದು ದಾಖಲೆಯಿಂದ ಕಂಡುಬರುತ್ತದೆ. ಪ್ರಕರಣದ ವಿವರಗಳನ್ನು ಪರಿಶೀಲಿಸಲಾಗಿ ಶ್ರೀ ಜಿ. ಶಿವರಾಜ್ ಇವರನ್ನು ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 39 ಎಡಿಇ 03 ದಿನಾಂಕ 14–05–2004 ರಂದು ಇವರ ಅಮಾನತ್ತನ್ನು ತೆರೆವು ಗೊಳಿಸಿ ವಿಶೇಷ ಭೂಸ್ವಾಧೀನಾಧಿಕಾರಿಗಳ ಕಛೇರಿ ಕೃಷ್ಣಾ ಮೇಲ್ದಂಡೆ ಯೋಜನೆ ಆಲಮಟ್ಟಿ ಇಲ್ಲಿಗೆ ನೇಮಿಸಲಾಗಿದೆ. ಅದರಂತೆ, ಸದರಿ ಅಧಿಕಾರಿಯು ದಿನಾಂಕ 20–05–2004 ರಂದು ಕರ್ತವ್ಯಕ್ಕೆ ಹಾಜರಾಗಿರುವುದು ಸಿ.ಟಿ.ಸಿ. ಯಿಂದ ತಿಳಿದುಬರುತ್ತದೆ. ನಂತರ ಇವರು ದಿನಾಂಕ 28–02–2006 ರಂದು ವಯೋ ನಿವೃತ್ತಿ ಹೊಂದಿರುತ್ತಾರೆ. ಶ್ರೀ ಜಿ. ಶಿವರಾಜ್ ಇವರು ದೋಷಾರೋಪಣಾ ಪಟ್ಟಿಗೆ ವಿವರಣೆ ಸಲ್ಲಿಸಿ, ತಾವು ನಿಡಗುಂದಿ ತಹಶೀಲ್ದಾರ್ ಹುದ್ದೆಯಲ್ಲಿ ದಿನಾಂಕ 14–08–2003ರಲ್ಲಿ ಜಿಲ್ಲಾಧಿಕಾರಿಗಳ ಕಛೇರಿಯಲ್ಲಿ ಹಾಜರಾಗಲಾಯಿತೆಂದು ತಿಳಿಸಿ, ಅವರ ವಿರುದ್ಧದ ಆಪಾದನೆಗಳನ್ನು ಅಲ್ಲಗಳೆದಿರುತ್ತಾರೆ. ಸದರಿಯವರ ಹೇಳಿಕೆ ಬಗ್ಗೆ ಬಿಜಾಪುರ ಜಿಲ್ಲಾಧಿಕಾರಿಗಳಿಂದ ಅಭಿಪ್ರಾಯ ಪಡೆದಿದ್ದು, ಸದರಿ ಅಧಿಕಾರಿಯ ಹೇಳಿಕೆಯನ್ನು ಒಪ್ಪಲಾಗುವುದಿಲ್ಲವೆಂದು ಜಿಲ್ಲಾಧಿಕಾರಿಗಳು ಅಭಿಪ್ರಾಯ ನೀಡಿರುತ್ತಾರೆ.

ಶ್ರೀ ಜಿ. ಶಿವರಾಜ್ ಇವರಿಗೆ ದಿನಾಂಕ 22–05–03 ರಂದು ವಿಶೇಷ ತಹಶೀಲ್ದಾರ್, ನಿಡಗುಂದಿ ಬಿಜಾಪುರ ಜಿಲ್ಲೆ ಇಲ್ಲಿಗೆ ಸ್ಥಳನಿಯುಕ್ತಿಗೊಳಿಸಿದ್ದರು ಹಾಜರಾಗಿರುವುದಿಲ್ಲ ಇವರು ಕರ್ತವ್ಯಕ್ಕೆ ಹಾಜರಾಗದ ಕಾರಣದಿಂದ ಸರ್ಕಾರದಲ್ಲಿ ಅಮಾನತ್ತುಗೊಳಿಸುವ ಕ್ರಮ ಜರುಗುತ್ತಿರುವುದನ್ನು ತಿಳಿದುಕೊಂಡು ದಿನಾಂಕ 14–08–2003ರಂದು ಹಾಜರಾಗುತ್ತಿರುವುದಾಗಿ ಹಿಂದಿನ ದಿನಾಂಕ ನಮೂದಿಸಿ ದಿನಾಂಕ 10–09–2003ರಲ್ಲಿ ಜಿಲ್ಲಾಧಿಕಾರಿಗಳ ಕಛೇರಿಯಲ್ಲಿ ಇವರ ಮನವಿ ಸ್ವೀಕೃತ ವಾಗಿರುವುದೇ ಇವರ ಗೈರು ಹಾಜರಿಯನ್ನು ದೃಢಪಡಿಸುತ್ತದೆ. ಅಷ್ಟೊತ್ತಿಗಾಗಲೇ ಸದರಿ ಅಧಿಕಾರಿಯನ್ನು ಸರ್ಕಾರವು ದಿನಾಂಕ 29–08–2003 ರಂದು ಅಮಾನತ್ತುಗೊಳಿಸಿರುತ್ತದೆ. ಸ್ಥಳನಿಯುಕ್ತಿಗೊಳಿಸಿದ ಕಛೇರಿಯಲಿ ಹಾಜರಾಗಿ ಕಾರ್ಯನಿರ್ವಹಿಸಿದ ಬಗ್ಗೆ ಯಾವುದೇ ದಾಖಲೆಗಳನ್ನು ಹಾಗೂ ಸಾಕ್ಷಿಗಳನ್ನು ಒದಗಿಸಿರುವುದಿಲ್ಲ ಹಾಗೂ ತಹಶೀಲ್ದಾರ್, ಬಸವನಬಾಗೇವಾಡಿ ಇವರು ನಿಡಗುಂದಿ ವಿಶೇಷ ತಹಶೀಲ್ದಾರ್ ಕಛೇರಿ ಸ್ಥಾಪನೆ ಹಾಗೂ ಸಿಬ್ಬಂದಿಯ ಬಗ್ಗೆ ಚರ್ಚಿಸಿರುವುದಿಲ್ಲವೆಂದು ವರದಿ ನೀಡಿರುತ್ತಾರೆ. ಈ ಎಲ್ಲಾ ಕಾರಣಗಳಿಂದ ಶ್ರೀ ಜಿ. ಶಿವರಾಜ್, ನಿವೃತ್ತ ವಿಶೇಷ ತಹಶೀಲ್ದಾರ್ ಇವರು ದಿನಾಂಕ 22–05–2003 ರಿಂದ ದಿನಾಂಕ 20–05–2004ರವರೆಗೆ ಅನಧಿಕೃತವಾಗಿ ಗೈರು ಹಾಜರಾಗಿರುವುದು ದೃಢಪಟ್ಟಿರುತ್ತದೆ. ಅಧಿಕಾರಿಯು ದಿನಾಂಕ 28–02–2006ರಲ್ಲಿ ವಯೋ ನಿವೃತ್ತಿ ಹೊಂದಿರುವುದರಿಂದ ಸಿಸಿಎ ನಿಯಮ 12 ರನ್ವಯ ಶಿಸ್ತು ಪ್ರಾಧಿಕಾರವು ಆಪಾದಿತ ಅಧಿಕಾರಿ ಸಲ್ಲಿಸಿದ ಹೇಳಿಕೆಯ ಮೇಲೆ Minor Penalty ವಿಧಿಸಲು ಅವಕಾಶವಿರುತ್ತದೆ. ಈ ನಿಯಮದಂತೆ ಆಪಾದಿತ ಅಧಿಕಾರಿಗೆ ದೋಷಾರೋಪಣಾಪಟ್ಟಿ ಜಾರಿ ಮಾಡಿ ಅವರ ಹೇಳಿಕೆ ಪಡೆಯಲಾಗಿದೆ. ಸದರಿ ಅಧಿಕಾರಿಯು ಸ್ಥಳನಿಯುಕ್ತಿಗೊಳಿಸಿದ ಸ್ಥಳದಲ್ಲಿ ಹಾಜರಾಗದೆ ಅನಧಿಕೃತ ಗೈರು ಹಾಜರಾಗಿರುವುದು ಜಿಲ್ಲಾಧಿಕಾರಿಗಳ ವರದಿಯಿಂದ ದೃಢಪಟ್ಟಿರುವುದರಿಂದ ಇವರ ದಿನಾಂಕ 22–05–2003 ರಿಂದ ದಿನಾಂಕ 20–05–2004 ರವರೆಗಿನ ಅವಧಿಯನ್ನು ಕೆ.ಸಿ.ಎಸ್.ಆರ್. ನಿಯಮ 106–ಎ ರನ್ವಯ ಗೈರು ಹಾಜರಿಯೆಂದು ಪರಿಗಣಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ

**ಸರ್ಕಾರಿ ಆದೇಶ ಸಂಖ್ಯೆ: ಕಂಇ 39 ಎಡಿಇ 2003, ಬೆಂಗಳೂರು, ದಿನಾಂಕ 4–01–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಜಿ. ಶಿವರಾಜ್, ನಿವೃತ್ತ ವಿಶೇಷ ತಹಶೀಲ್ದಾರ್ ರವರು ಸ್ಥಳನಿಯುಕ್ತಿಗೊಳಿಸಿದ ಸ್ಥಳದಲ್ಲಿ ಹಾಜರಾಗದೆ ಅನಧಿಕೃತ ಗೈರು ಹಾಜರಾಗಿರುವುದು ಜಿಲ್ಲಾಧಿಕಾರಿಗಳ ವರದಿಯಿಂದ ದೃಢಪಟ್ಟಿರುವುದರಿಂದ ಇವರು ದಿನಾಂಕ 22–05–2003 ರಿಂದ ದಿನಾಂಕ 20–05–2004 ರವರೆಗಿನ ಅವಧಿಯನ್ನು ಕೆ.ಸಿ.ಎಸ್.ಆರ್. ನಿಯಮ 106–ಎ ರನ್ವಯ ಗೈರುಹಾಜರಿಯೆಂದು ಪರಿಗಣಿಸಿ ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಬಿ ಸಸಾಲಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಸೇವೆಗಳು–3)

ಪಿ.ಆರ್. ನಂ. 281

## ಕಂದಾಯ ಸಚಿವಾಲಯ

**ವಿಷಯ** : ಬೆಳಗಾವಿ ರಿ.ಸ.ನಂ. 1393 ಬ ನೇದ್ದಕ್ಕೆ ಸಂಬಂಧಿಸಿದಂತೆ, ಕಾನೂನು ವಿರುದ್ಧವಾಗಿ ಹಕ್ಕು ದಾಖಲೆ ಸಂಖ್ಯೆ: 3994 ನ್ನು ಮಂಜೂರು ಮಾಡಿದ ತಪ್ಪಿತಸ್ಥ ಅಧಿಕಾರಿ/ನೌಕರರ ವಿರುದ್ಧ ಜಂಟಿ ಇಲಾಖಾ ವಿಚಾರಣೆ ನಡೆಸಲು ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಗಳನ್ನು ನೇಮಿಸುವ ಕುರಿತು–ಆದೇಶ.

**ಓದಲಾಗಿದೆ** :
1) ಜಿಲ್ಲಾಧಿಕಾರಿಗಳು, ಬೆಳಗಾವಿ ಜಿಲ್ಲೆ, ಬೆಳಗಾವಿ ಇವರ ಪ್ರಸ್ತಾವನೆ ಸಂಖ್ಯೆ: ಕಂಶಾ/ಸಿಬ್ಬಂದಿ–1/ವಿವ/88/05–06, ದಿನಾಂಕ 21–1–2006
2) ಸರ್ಕಾರದ ಕಾರಣಕೇಳುವ ನೋಟೀಸು ಸಂಖ್ಯೆ: ಕಂಇ 07 ಎಡಿಇ 2006, ದಿನಾಂಕ 8–5–2007
3) ಸರ್ಕಾರದ ಕಾರಣ ಕೇಳುವ ನೋಟೀಸು ಸಂಖ್ಯೆ: ಕಂಇ 07 ಎಡಿಇ 2006, ದಿನಾಂಕ 12–3–2010.
4) ಸರ್ಕಾರದ ಕಾರಣ ಕೇಳುವ ನೋಟೀಸು ಸಂಖ್ಯೆ: ಕಂಇ 07 ಎಡಿಇ 2006, ದಿನಾಂಕ 12–3–2010
5) ಶ್ರೀ ಬಿ. ಆರ್. ಪಾಟೀಲ, ಶಿರಸ್ತೇದಾರ್ ಇವರ ಲಿಖಿತ ಹೇಳಿಕೆ ದಿನಾಂಕ 31–5–2010
6) ಶ್ರೀ ಅಶೋಕ್ ಪತ್ತಾರ್, ದ್ವಿದ.ಸ. ಇವರ ಲಿಖಿತ ಹೇಳಿಕೆ ದಿನಾಂಕ 23–6–2010
7) ಶ್ರೀ ವಿ. ಪಿ. ಕಾಂಬಳೆ, ನಿವೃತ್ತ ತಹಶೀಲ್ದಾರ್ ಇವರ ಲಿಖಿತ ಹೇಳಿಕೆ ದಿನಾಂಕ 16–8–2010

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ: (1)ರಲ್ಲಿ ಜಿಲ್ಲಾಧಿಕಾರಿಗಳು, ಬೆಳಗಾವಿ ಜಿಲ್ಲೆ ಇವರ ದಿನಾಂಕ 21-1-2006ರ ಪ್ರಸ್ತಾವನೆಯಲ್ಲಿ, ಬೆಳಗಾವಿಯ ಮಾನ್ಯ ಪ್ರಿನ್ಸಿಪಲ್ ಸಿವಿಲ್ ಜಡ್ಜ್ (ಜೂನಿಯರ್ ಡಿವಿಜನ್) ಇವರ ನ್ಯಾಯಾಲಯದ ಅಪೀಲು ದಾವೆ ಸಂಖ್ಯೆ: 392/99 ರಡಿ ದಿನಾಂಕ 31-1-2000 ರಂದು ನೀಡಲಾದ ತೀರ್ಪನ್ನು ದುರುಪಯೋಗ ಪಡಿಸಿಕೊಂಡು ರಿ.ಸ.ನಂ. 1393 ಬ ನೇದ್ದರಲ್ಲಿ ಸರ್ಕಾರದ ಹೆಸರನ್ನು ಕಡಿಮೆ ಮಾಡಿ ಕಾನೂನು ವಿರುದ್ಧವಾಗಿ ಖಾಸಗಿ ವ್ಯಕ್ತಿ ಶ್ರೀಮತಿ ಯಲ್ಲೂಭಾಯಿ ಜಾಧವ ಲೊಂಡೆ ಇವರ ಹೆಸರನ್ನು ಕಂದಾಯ ದಾಖಲೆಗಳಲ್ಲಿ ದಾಖಲಿಸಲು ಈ ಕೆಳಗೆ ಕಾಣಿಸಿದ ಸಿಬ್ಬಂದಿಯು ಕಾರಣರಾಗಿರುತ್ತಾರೆ.

1) ಶ್ರೀ ಎನ್. ಎಂ. ಶಿರಹಟ್ಟಿ, ಹಿಂದಿನ ತಹಶೀಲ್ದಾರ್, ಬೆಳಗಾವಿ (ನಿವೃತ್ತ)

2) ಶ್ರೀ ವಿ. ಪಿ. ಕಾಂಬಳೆ, ಹಿಂದಿನ ತಹಶೀಲ್ದಾರ್, ಬೆಳಗಾವಿ

3) ಶ್ರೀ ಬಿ. ಆರ್. ಪಾಟೀಲ, ಹಿಂದಿನ ಶಿರಸ್ತೇದಾರ್, ತಹಶೀಲ್ದಾರ್ ಕಛೇರಿ, ಬೆಳಗಾವಿ

4) ಶ್ರೀ ಎ. ಎಸ್. ಪತ್ತಾರ್, ಹಿಂದಿನ ದ್ವಿ.ದ.ಸ. ತಹಶೀಲ್ದಾರ್ ಕಛೇರಿ, ಬೆಳಗಾವಿ

ಮೇಲ್ಕಂಡ ಸಿಬ್ಬಂದಿಗಳು ಅನಧಿಕೃತವಾಗಿ ಹಕ್ಕು ದಾಖಲೆ ಸಂಖ್ಯೆ: 3934ನ್ನು ಮಂಜೂರು ಮಾಡಿ ಸರ್ಕಾರಿ ನೌಕರರಿಗೆ ಸಲ್ಲದ ರೀತಿಯಲ್ಲಿ ನಡೆದುಕೊಂಡು ಕ.ನಾ.ಸೇ. (ನಡತೆಗಳೂ) ನಿಯಮ 3(i)(ii)(iii) ನ್ನು ಉಲ್ಲಂಘಿಸಿರುವುದು ಮೇಲ್ನೋಟಕ್ಕೆ ದೃಢಪಡುತ್ತದೆ. ಈ ಪ್ರಕರಣದಲ್ಲಿ ಒಟ್ಟು ನಾಲ್ಕು ಜನ ಸಿಬ್ಬಂದಿ ಸಮಾವೇಶಗೊಂಡಿದ್ದು ಅದರಲ್ಲಿ ಇಬ್ಬರು ಪತ್ರಾಂಕಿತ ಅಧಿಕಾರಿಗಳಿದ್ದು ಅದರಲ್ಲಿ ಒಬ್ಬರು ಸೇವಾ ನಿವೃತ್ತರಾಗಿರುತ್ತಾರೆ. ಪತ್ರಾಂಕಿತ ಅಧಿಕಾರಿಗಳ ಹಾಗೂ ನಿವೃತ್ತ ಸಿಬ್ಬಂದಿಯ ವಿಷಯದಲ್ಲಿ ಶಿಸ್ತು ಕ್ರಮ ಜರುಗಿಸುವ ಅಧಿಕಾರ ಸರ್ಕಾರಕ್ಕೆ ಇರುವುದರಿಂದ ಈ ಎಲ್ಲಾ ಸಂಬಂಧಿಸಿದವರ ವಿರುದ್ಧ ಕ.ನಾ.ಸೇ (ವ.ನಿ ಮತ್ತು ಮೇ) ನಿಯಮಗಳು, 1957ರ ನಿಯಮ 11ರ ಮೇರೆಗೆ ಆಪಾದನಾ ಪಟ್ಟಿ ಅನುಬಂಧ-1 ರಿಂದ 4ನ್ನು ತಯಾರಿಸಿ ಸಂಬಂಧಿಸಿದ ದಾಖಲೆಗಳನ್ನು ಲಗತ್ತಿಸಿ, ಆರೋಪಿತ ಸಿಬ್ಬಂದಿಯ ವಿರುದ್ಧ ಕ.ನಾ.ಸೇ (ವ.ನಿ ಮತ್ತು ಮೇ) ನಿಯಮಗಳು, 1957ರ ನಿಯಮ 13ರಡಿಯಲ್ಲಿ ಜಂಟಿ ಇಲಾಖಾ ತನಿಖೆ ಜರುಗಿಸಿ ತಪ್ಪಿತಸ್ಥ ಸಿಬ್ಬಂದಿಯ ವಿರುದ್ಧ ಸೂಕ್ತ ಶಿಸ್ತು ಕ್ರಮ ಜರುಗಿಸುವಂತೆ ಕೋರುತ್ತಾ ಜಿಲ್ಲಾಧಿಕಾರಿಗಳು ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಜಿಲ್ಲಾಧಿಕಾರಿಗಳು ಸಲ್ಲಿಸಿರುವ ದೋಷಾರೋಪಣಾ ಪಟ್ಟಿಗಳು ಸ್ಪಷ್ಟವಾಗಿಲ್ಲದೇ ಇದ್ದುದರಿಂದ ಅವುಗಳನ್ನು ಪರಿಶೀಲಿಸಿ ಪರಿಷ್ಕೃತ ದೋಷಾರೋಪಣಾ ಪಟ್ಟಿಗಳನ್ನು ಮತ್ತು ಇನ್ನಿತರ ಮಾಹಿತಿಗಳನ್ನು ಸರ್ಕಾರಕ್ಕೆ ಕಳುಹಿಸುವಂತೆ ದಿನಾಂಕ 22-4-2006ರ ಪತ್ರದಲ್ಲಿ ಜಿಲ್ಲಾಧಿಕಾರಿಗಳನ್ನು ಕೋರಲಾಗಿತ್ತು. ಅದರಂತೆ ಜಿಲ್ಲಾಧಿಕಾರಿಗಳು ತಮ್ಮ ದಿನಾಂಕ 26-10-2006 ರ ಪತ್ರದೊಂದಿಗೆ ಸರ್ಕಾರವು ಕೋರಿರುವ ಮಾಹಿತಿ ಮತ್ತು ಪರಿಷ್ಕೃತ ದೋಷಾರೋಪಣಾ ಪಟ್ಟಿಗಳನ್ನು ಸರ್ಕಾರಕ್ಕೆ ಕಳುಹಿಸಿರುತ್ತಾರೆ. ಪ್ರಕರಣಕ್ಕೆ ಸಂಬಂಧಿಸಿದಂತೆ, ಅನುಬಂಧ-3ರಲ್ಲಿಯ ದಾಖಲೆಗಳನ್ನು ದೃಢೀಕರಿಸಿ, ದೋಷಾರೋಪಣೆ ಪಟ್ಟಿಗಳನ್ನು ದಿನಾಂಕ 12-12-2006 ರಂದು ಜಿಲ್ಲಾಧಿಕಾರಿಗಳು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (2) ರಲ್ಲಿ ಸರ್ಕಾರವು ದಿನಾಂಕ 8-5-2007 ರಂದು ಶ್ರೀ ವಿ. ಪಿ. ಕಾಂಬಳೆ, ನಿವೃತ್ತ, ತಹಶೀಲ್ದಾರ್, ಖಾನಾಪುರ ಇವರಿಗೆ ಕಾರಣ ಕೇಳುವ ನೋಟೀಸಿನೊಂದಿಗೆ ಜಿಲ್ಲಾಧಿಕಾರಿಗಳು ಕಳುಹಿಸಿರುವ ದೋಷಾರೋಪಣಾ ಪಟ್ಟಿಯ ಅನುಬಂಧ 1 ರಿಂದ 4 ಗಳನ್ನು ಜಾರಿಗೊಳಿಸಿ, ಸದರಿ ನೋಟೀಸು ಸ್ವೀಕರಿಸಿದ 15 ದಿನಗಳೊಳಗಾಗಿ ಲಿಖಿತ ಹೇಳಿಕೆಗಳನ್ನು ಸಲ್ಲಿಸುವಂತೆ ತಪ್ಪಿದಲ್ಲಿ ನಿಮ್ಮ ಪ್ರತಿವಾದವೇನೂ ಇಲ್ಲವೆಂದು ಭಾವಿಸಿ, ಕ.ನಾ.ಸೇ. (ವ.ನಿ ಮತ್ತು ಮೇ) ನಿಯಮ 1957ರ ನಿಯಮ 11ನೇ ಮೇರೆಗೆ ಅವರ ಮೇಲೆ ಏಕಪಕ್ಷೀಯವಾಗಿ ಮುಂದಿನ ಕ್ರಮ ತೆಗೆದುಕೊಳ್ಳಲಾಗುವುದು ಎಂದು ತಿಳಿಸಲಾಗಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (3)ರಲ್ಲಿ ಸರ್ಕಾರವು ದಿನಾಂಕ 12-3-2010ರಂದು, ಶ್ರೀ ಬಿ. ಆರ್. ಪಾಟೀಲ್, ಶಿರಸ್ತೇದಾರ್, ಉಪ ವಿಭಾಗಾಧಿಕಾರಿಗಳ ಕಛೇರಿ, ಬೆಳಗಾಂ ಜಿಲ್ಲೆ ಇವರಿಗೆ ಕಾರಣ ಕೇಳುವ ನೋಟೀಸಿನೊಂದಿಗೆ ಜಿಲ್ಲಾಧಿಕಾರಿಗಳು ಕಳುಹಿಸಿರುವ ದೋಷಾರೋಪಣೆ ಪಟ್ಟಿಯ ಅನುಬಂಧ-1 ರಿಂದ 4 ಗಳನ್ನು ಜಾರಿಗೊಳಿಸಿ, ಸದರಿ ನೋಟೀಸು ಸ್ವೀಕರಿಸಿದ 15 ದಿನಗಳೊಳಗೆ ಲಿಖಿತ ಹೇಳಿಕೆಯನ್ನು ಸಲ್ಲಿಸುವಂತೆ ತಪ್ಪಿದಲ್ಲಿ ನಿಮ್ಮ ಪ್ರತಿವಾದವೇನೂ ಇಲ್ಲವೆಂದು ಭಾವಿಸಿ, ಕ.ನಾ.ಸೇ (ವ.ನಿ ಮತ್ತು ಮೇ) ನಿಯಮ 1957ರ ನಿಯಮ 11ನೇ ಮೇರೆಗೆ ಅವರ ಮೇಲೆ ಏಕಪಕ್ಷೀಯವಾಗಿ ಮುಂದಿನ ಕ್ರಮ ತೆಗೆದುಕೊಳ್ಳಲಾಗಿರುವುದು ಎಂದು ತಿಳಿಸಲಾಗಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (4)ರಲ್ಲಿ ಸರ್ಕಾರವು ದಿನಾಂಕ 12-3-2010 ರಂದು ಶ್ರೀ ಅಶೋಕ್ ಪತ್ತಾರ್, ದ್ವಿತೀಯ ದರ್ಜೆ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ, ಬೆಳಗಾಂ ಇವರಿಗೆ ಕಾರಣ ಕೇಳುವ ನೋಟೀಸಿನೊಂದಿಗೆ ಜಿಲ್ಲಾಧಿಕಾರಿಗಳು ಕಳುಹಿಸಿರುವ ದೋಷಾರೋಪಣೆ ಪಟ್ಟಿಯ ಅನುಬಂಧ 1 ರಿಂದ 4 ಗಳನ್ನು ಜಾರಿಗೊಳಿಸಿ, ಸದರಿ ನೋಟೀಸು ಸ್ವೀಕರಿಸಿದ 15 ದಿನಗಳೊಳಗೆ ಲಿಖಿತ ಹೇಳಿಕೆಯನ್ನು ಸಲ್ಲಿಸುವಂತೆ ತಪ್ಪಿದಲ್ಲಿ ನಿಮ್ಮ ಪ್ರತಿವಾದವೇನೂ ಇಲ್ಲವೆಂದು ಭಾವಿಸಿ, ಕ.ನಾ.ಸೇ. (ವ.ನಿ. ಮತ್ತು ಮೇ) ನಿಯಮ 1957ರ ನಿಯಮ 11ನೇ ಮೇರೆಗೆ ಅವರ ಮೇಲೆ ಏಕಪಕ್ಷೀಯವಾಗಿ ಮುಂದಿನ ಕ್ರಮ ತೆಗೆದುಕೊಳ್ಳಲಾಗುವುದು ಎಂದು ತಿಳಿಸಲಾಗಿರುತ್ತದೆ.

ಸರ್ಕಾರದ ಕಾರಣಕೇಳುವ ನೋಟೀಸಿಗೆ ಶ್ರೀ ಬಿ. ಆರ್. ಪಾಟೀಲ, ಶಿರಸ್ತೇದಾರ್ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ: (5) ದಿನಾಂಕ 31-5-2010ರ ಲಿಖಿತ ಹೇಳಿಕೆಯಲ್ಲಿ, ತಮ್ಮ ವಿರುದ್ಧದ 4 ಆಪಾದನೆಗಳನ್ನು ಅಲ್ಲಗಳೆದು, ಆಪಾದನೆಗಳನ್ನು ದಯಮಾಡಿ ಕೈಬಿಡಬೇಕೆಂದು ತಮ್ಮ ಲಿಖಿತ ಹೇಳಿಕೆಯಲ್ಲಿ ತಿಳಿಸಿರುತ್ತಾರೆ.

ಸರ್ಕಾರದ ಕಾರಣಕೇಳುವ ನೋಟೀಸಿಗೆ ಶ್ರೀ ಅಶೋಕ್ ಪತ್ತಾರ್, ದ್ವಿ.ದ.ಸ. ಇವರು ಮೇಲೆ ಓದಲಾದ ಕ್ರಮ ಸಂಖ್ಯೆ: (6) ದಿನಾಂಕ 23-6-2010ರ ಲಿಖಿತ ಹೇಳಿಕೆಯಲ್ಲಿ ತಮ್ಮ ವಿರುದ್ಧದ 2 ಆಪಾದನೆಗಳನ್ನು ಅಲ್ಲಗಳೆದು, ತಮ್ಮ ಮೇಲಿನ ಅಪಾದನೆಗಳು ಆಧಾರರಹಿತವಾಗಿದ್ದು, ಕಾನೂನುಬಾಹಿರ ಸತ್ಯಕ್ಕೆ ದೂರವಾಗಿದ್ದು ಹಾಗೂ ಅಸಮಂಜಸವಾಗಿರುತ್ತದೆಯಾದ್ದರಿಂದ, ತಮ್ಮ ವಿರುದ್ಧದ ಆಪಾದನೆಗಳನ್ನು ದಯಮಾಡಿ ಕೈಬಿಡಬೇಕೆಂದು ತಮ್ಮ ಲಿಖಿತ ಹೇಳಿಕೆಯಲ್ಲಿ ತಿಳಿಸಿರುತ್ತಾರೆ.

ಸರ್ಕಾರದ ಕಾರಣಕೇಳುವ ನೋಟೀಸಿಗೆ ಶ್ರೀ ವಿ. ಪಿ. ಕಾಂಬಳೆ, ನಿವೃತ್ತ ತಹಶೀಲ್ದಾರ್ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ: (7) ದಿನಾಂಕ 16-8-2010ರ ಲಿಖಿತ ಹೇಳಿಕೆಯಲ್ಲಿ ತಮ್ಮ ವಿರುದ್ಧ 5 ಆಪಾದನೆಗಳನ್ನು ಅಲ್ಲಗಳೆದು ಅವರು ಸಲ್ಲಿಸಿರುವ ಕಂಡಿಕೆವಾರು ಉತ್ತರವನ್ನು ಸಹಾನುಭೂತಿಯಿಂದ ಪರಿಶೀಲಿಸಿ, ದಿನಾಂಕ 31-5-2007 ರಂದು ನಿವೃತ್ತವಾದ ತಮ್ಮ ಮೇಲೆ ಯಾವುದೇ ಕ್ರಮ ಕೈಗೊಳ್ಳಬಾರದೆಂದು ತಮ್ಮ ಲಿಖಿತ ಹೇಳಿಕೆಯಲ್ಲಿ ವಿನಂತಿಸಿರುತ್ತಾರೆ.

ಮೇಲಿನ ಪ್ರಕರಣದಲ್ಲಿ ಆಪಾದಿತರು ತಮ್ಮ ಮೇಲಿನ ಆಪಾದನೆಗಳನ್ನು ನಿರಾಕರಿಸಿರುತ್ತಾರೆ. ಅಕ್ರಮವಾಗಿ ಖಾತೆ ಮಾಡಿರುವುದನ್ನು ಉಪ ವಿಭಾಗಾಧಿಕಾರಿಗಳು ರದ್ದುಪಡಿಸಿದ್ದರೂ ಸದರಿ ಪ್ರಕರಣದ ವಿರುದ್ಧ ಅರ್ಜಿದಾರರು ನ್ಯಾಯಾಲಯಕ್ಕೆ ಹೋಗಿದ್ದು, ನ್ಯಾಯಾಲಯದಲ್ಲಿ ಬಾಕಿ ಇರುವುದಾಗಿ ಈಗಿನ ಬೆಳಗಾವಿ ತಹಶೀಲ್ದಾರರಿಂದ ತಿಳಿದುಕೊಳ್ಳಲಾಗಿದೆ. ಪ್ರಕರಣದಲ್ಲಿನ ಸತ್ಯಾಸತ್ಯತೆಯನ್ನು ತಿಳಿದುಕೊಂಡು ನಿರ್ಣಯ ತೆಗೆದುಕೊಳ್ಳುವ ಸಲುವಾಗಿ (1) ಶ್ರೀ ವಿ. ಪಿ. ಕಾಂಬಳೆ, ನಿವೃತ್ತ ತಹಶೀಲ್ದಾರ್ (2) ಶ್ರೀ ಬಿ. ಆರ್. ಪಾಟೀಲ, ಶಿರಸ್ತೇದಾರ್ (3) ಶ್ರೀ ಅಶೋಕ್ ಪತ್ತಾರ್, ದ್ವಿ.ದ.ಸ. ಇವರುಗಳ ವಿರುದ್ಧ ಬೆಳಗಾವಿ ಜಿಲ್ಲೆಯಲ್ಲಿ ಜಂಟಿ ಇಲಾಖಾ ವಿಚಾರಣೆ ನಡೆಸಲು ಶ್ರೀ ಎಫ್. ಸಿ. ಗುಡ್ಡಾಕಾರ್, ನಿವೃತ್ತ ನ್ಯಾಯಾಧೀಶಕರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮತ್ತು ತಹಶೀಲ್ದಾರ್, ಬೆಳಗಾವಿ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲು ತೀರ್ಮಾನಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 07 ಎಡಿಇ 2006, ಬೆಂಗಳೂರು, ದಿನಾಂಕ 4-1-2011**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 13 ಹಾಗೂ ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 214 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು (1) ಶ್ರೀ ವಿ. ಪಿ. ಕಾಂಬಳೆ, ನಿವೃತ್ತ ತಹಶೀಲ್ದಾರ್ (2) ಶ್ರೀ ಬಿ. ಆರ್. ಪಾಟೀಲ್, ಶಿರಸ್ತೇದಾರ್ (3) ಶ್ರೀ ಅಶೋಕ್ ಪತ್ತಾರ್, ದ್ವಿ.ದ.ಸ. ಇವರುಗಳ ವಿರುದ್ಧ ಬೆಳಗಾವಿ ಜಿಲ್ಲೆಯಲ್ಲಿ ಜಂಟಿ ಇಲಾಖಾ ವಿಚಾರಣೆ ನಡೆಸಲು ಶ್ರೀ ಎಫ್. ಸಿ. ಗುಡ್ಡಾಕಾರ್, ನಿವೃತ್ತ ನ್ಯಾಯಾಧೀಶಕರು, ಗಣಪತಿ ಗುಡಿ ಹತ್ತಿರ, ಸಂಗೊಳ್ಳಿ ರಾಯಣ್ಣ ನಗರ, ಧಾರವಾಡ 580 002 ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮತ್ತು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ತಹಶೀಲ್ದಾರ್, ಬೆಳಗಾವಿ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ವಿಚಾರಣಾಧಿಕಾರಿಗಳು ಈ ಪ್ರಕರಣದ ವಿಚಾರಣೆಯನ್ನು ಜಿಲ್ಲಾಧಿಕಾರಿಗಳು, ಬೆಳಗಾವಿ ಇವರ ಕಚೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗದಿಪಡಿಸಿದ ಸ್ಥಳದಲ್ಲಿ ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಲಭ್ಯವಿರುವ ಕಛೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶ ಮಾಡುವುದು ಹಾಗೂ ಸಂಬಂಧಿಸಿದ ಕಛೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ/ಬೆರಳಚ್ಚುಗಾರರ ಸಹಾಯವನ್ನು ಹಾಗೂ ಲೇಖನ ಸಾಮಗ್ರಿಗಳನ್ನು ಜಿಲ್ಲಾಧಿಕಾರಿಗಳು, ಬೆಳಗಾವಿ ಜಿಲ್ಲೆ ಇವರು ಒದಗಿಸತಕ್ಕದ್ದು.

ಈ ಪ್ರಕರಣದ ವಿಚಾರಣೆಗಾಗಿ ವಿಚಾರಣಾಧಿಕಾರಿಗಳಿಗೆ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 22 ಸೇಇವಿ 2007 ದಿನಾಂಕ 11-4-2008 ರನ್ವಯ ರೂ. 8000/- (ಎಂಟು ಸಾವಿರ ರೂ.ಗಳು ಮಾತ್ರ)ಗಳ ಸಂಚಿತ ಸಂಭಾವನೆಯನ್ನು ಹಾಗೂ ರೂ. 1500/- (ಒಂದು ಸಾವಿರದ ಐನೂರು ರೂ.ಗಳು ಮಾತ್ರ) ಗಳ ವಾಹನ ಭತ್ಯೆ (ಕನ್ವೇಯನ್ಸ್ ಆಲೋಯನ್ಸ್) ಅನ್ನು ಜಿಲ್ಲಾಧಿಕಾರಿಗಳು, ಬೆಳಗಾವಿ ಜಿಲ್ಲೆ ಇವರು ಪಾವತಿ ಮಾಡತಕ್ಕದ್ದು.

ವಿಚಾರಣಾಧಿಕಾರಿಗಳು ಇಲಾಖಾ ವಿಚಾರಣೆಯನ್ನು ಮೇಲ್ಕಂಡ ನಿಯಮಗಳ ನಿಯಮ 11 ಮತ್ತು 11(ಎ) ರಲ್ಲಿನ ವಿಧಿವಿಧಾನವನ್ನು ಅನುಸರಿಸಿ, ಜರುಗಿಸಿ, ವಿಚಾರಣಾ ವರದಿಯನ್ನು ಎರಡು ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಬಿ ಸಸಾಲಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಸೇವೆಗಳು-3)

ಪಿ.ಆರ್. ನಂ. 282

## ಕಂದಾಯ ಸಚಿವಾಲಯ

**ವಿಷಯ** : ಆಸರೆ ಯೋಜನೆಯಡಿಯಲ್ಲಿ ಮನೆ ನಿರ್ಮಾಣಕ್ಕಾಗಿ ವಿದ್ಯುಚ್ಛಕ್ತಿ ವ್ಯತ್ಯಯ ಉಂಟಾದ ಗ್ರಾಮಗಳಲ್ಲಿ ಡೀಸೆಲ್ ಜನರೇಟರನ್ನು ಬಾಡಿಗೆ ಆಧಾರದ ಮೇಲೆ ಪಡೆಯುವ ಬಗ್ಗೆ.

**ಓದಲಾಗಿದೆ** : ಗುಲ್ಬರ್ಗಾ ಜಿಲ್ಲಾಧಿಕಾರಿಗಳ ಪತ್ರ ಸಂ.ಭೂಸ್ವಾ.53/10-11, ದಿನಾಂಕ 04-09-2010

**ಪ್ರಸ್ತಾವನೆ :**

ಮೇಲೆ ಓದಲಾದ ಗುಲ್ಬರ್ಗಾ ಜಿಲ್ಲಾಧಿಕಾರಿಗಳ ಪತ್ರದಲ್ಲಿ ಆಸರೆ ಯೋಜನೆಯಡಿಯಲ್ಲಿ ಮನೆ ನಿರ್ಮಾಣಕ್ಕಾಗಿ ವಿದ್ಯುಚ್ಛಕ್ತಿ ವ್ಯತ್ಯಯ ಉಂಟಾದ ಗ್ರಾಮಗಳಲ್ಲಿ ಡೀಸೆಲ್ ಜನರೇಟರ್‌ನ್ನು ಬಾಡಿಗೆ ಆಧಾರದ ಮೇಲೆ ಪಡೆಯಲಾಗಿರುತ್ತದೆ. ಈ ಡೀಸೆಲ್ ಜನರೇಟರ್‌ನಿಂದ ವಿದ್ಯುಚ್ಛಕ್ತಿ ಪಡೆದು ಮನೆ ನಿರ್ಮಾಣಕ್ಕೆ ನೀರನ್ನು ಒದಗಿಸಲಾಗಿರುತ್ತದೆ. ಆದುದರಿಂದ ಈ ಡೀಸೆಲ್ ಜನರೇಟರ್‌ನ ಬಾಡಿಗೆಯ ಹಣ ರೂ. 26,506/-ಗಳನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ. ಈ ಹಿನ್ನೆಲೆಯಲ್ಲಿ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 174(ಭಾ) ಟಿಎನ್‌ಆರ್ 2010, ಬೆಂಗಳೂರು, ದಿನಾಂಕ: 04-01-2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಆಸರೆ ಯೋಜನೆಯಡಿಯಲ್ಲಿ ಮನೆಗಳ ನಿರ್ಮಾಣಕ್ಕಾಗಿ ಡೀಸೆಲ್ ಜನರೇಟರ್‌ನ್ನು ಬಾಡಿಗೆ ಆಧಾರದ ಮೇಲೆ ಪಡೆದ ಬಾಬ್ತು ರೂ. 26,506/-(ರೂಪಾಯಿ ಇಪ್ಪತ್ತಾರು ಸಾವಿರದ ಐದುನೂರ ಆರು ಮಾತ್ರ) ನ್ನು ಜಿಲ್ಲಾಧಿಕಾರಿಗಳು, ಗುಲ್ಬರ್ಗಾ ಜಿಲ್ಲೆ, ಗುಲ್ಬರ್ಗಾ ಇವರಿಗೆ ಬಿಡುಗಡೆ ಮಾಡಲಾಗಿದೆ.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 8235-00-111-0-02 Public Contributions to the Calamity Relief ಅಡಿಯಲ್ಲಿ ಭರಿಸತಕ್ಕದ್ದು.

ಮೇಲಿನಂತೆ ಬಿಡುಗಡೆ ಮಾಡಿರುವ ಮೊತ್ತವನ್ನು ಜಿಲ್ಲಾಧಿಕಾರಿಗಳು ಸದರಿ ಲೆಕ್ಕ ಶೀರ್ಷಿಕೆ ಅಡಿಯಲ್ಲಿ ಡ್ರಾ ಮಾಡಲು ಪೇಯಿಸ್ ರಸೀದಿ (ಸಿಟಿಎಸ್-8) ಬಿಲ್ಲು ತಯಾರಿಸಿ, ಮೇಲು ಸಹಿ ಮಾಡಿ ಖಜಾನೆಗೆ ಸಲ್ಲಿಸಲು ಸೂಚಿಸಿದೆ.

ಈಗ ಬಿಡುಗಡೆ ಮಾಡುತ್ತಿರುವ ಅನುದಾನಕ್ಕೆ ಹಣ ಬಳಕೆ ಪತ್ರವನ್ನು ವೆಚ್ಚದ ವಿವರಗಳೊಂದಿಗೆ ಸಲ್ಲಿಸುವುದು ಹಾಗೂ ಭೌತಿಕ ಹಾಗೂ ಆರ್ಥಿಕ ಪ್ರಗತಿಯ ವಿವರಗಳನ್ನು ಸಹ ಸಲ್ಲಿಸುವುದು.

ಈ ಮೊತ್ತವನ್ನು ಯಾವ ಉದ್ದೇಶಕ್ಕಾಗಿ ಬಿಡುಗಡೆ ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಉಪಯೋಗಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ. ಗಂಗಾಧರ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ವಿ.ನಿ. ಮತ್ತು ಸೇವೆಗಳು-2)

ಪಿ.ಆರ್. ನಂ. 283

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

**ವಿಷಯ** : ರಾಷ್ಟ್ರೀಯ ಕೇಂದ್ರ ಪುರಸ್ಕೃತ ಪಿ.ಪಿ.ಆರ್. ರೋಗ ನಿಯಂತ್ರಣ ಕಾರ್ಯಕ್ರಮ (ಎನ್‌ಸಿಪಿಪಿಆರ್) ಅಡಿ ರಾಜ್ಯಮಟ್ಟದ ಸಮಿತಿಯನ್ನು ರಚಿಸುವ ಕುರಿತು.

**ಓದಲಾಗಿದೆ** : 1) ಭಾರತ ಸರ್ಕಾರದ ಪತ್ರ ಸಂಖ್ಯೆ: 53–102(ಕಟಿಕೆ) 2010 ಎಲ್‌ಡಿಟಿ(ಎಲ್‌ಹೆಚ್), ದಿನಾಂಕ 22–9–2010.
2) ಸರ್ಕಾರದ ಆದೇಶ ಸಂಖ್ಯೆ: ಪಸಂಮೀ 229 ಸಲೆವಿ 2010, ದಿನಾಂಕ 24–12–2010
3) ಪತ್ರ ಸಂಖ್ಯೆ: ಅಪ/ಸಂ/ಯೋಜನೆ–2/ವಿವ–29/2010–11, ದಿನಾಂಕ 03–01–2011

***

**ಪ್ರಸ್ತಾವನೆ :**

ಮೇಲೆ ಕ್ರಮಾಂಕ (1)ರಲ್ಲಿ ಓದಲಾದ ದಿನಾಂಕ 22–9–2010ರ ಭಾರತ ಸರ್ಕಾರದ ಆದೇಶದಲ್ಲಿ ಕೇಂದ್ರ ಪುರಸ್ಕೃತ ಯೋಜನೆ ನ್ಯಾಷನಲ್ ಕಂಟ್ರೋಲ್ ಪ್ರೋಗ್ರಾಂ ಆನ್ ಪಿಪಿಆರ್ (ಎನ್‌ಸಿಪಿಪಿಆರ್) ಯೋಜನೆಯನ್ನು ರಾಜ್ಯದಲ್ಲಿ ಅನುಷ್ಠಾನಗೊಳಿಸಲು ಮಂಜೂರಾತಿ ನೀಡಲಾಗಿದೆ ಹಾಗೂ ಮೇಲೆ ಕ್ರಮಾಂಕ (2)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಸದರಿ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಲು ` 596.98 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ.

ಇದೀಗ ಕ್ರಮಾಂಕ (3)ರಲ್ಲಿ ಓದಲಾದ ಪತ್ರದಲ್ಲಿ ಆಯುಕ್ತರು, ಪಶುಪಾಲನೆ ಮತ್ತು ಪಶುವೈದ್ಯಕೀಯ ಸೇವೆಗಳು, ಬೆಂಗಳೂರು ರವರು ಕೇಂದ್ರ ಪುರಸ್ಕೃತ ಯೋಜನೆ ನ್ಯಾಷನಲ್ ಕಂಟ್ರೋಲ್ ಪ್ರೋಗ್ರಾಂ ಆನ್ ಪಿಪಿಆರ್ (ಎನ್‌ಸಿಪಿಪಿಆರ್) ಯೋಜನೆಯನ್ನು ಯಶಸ್ವಿಯಾಗಿ ಅನುಷ್ಠಾನಗೊಳಿಸಲು ಯೋಜನೆಯ ಮೇಲ್ವಿಚಾರಣೆ, ಪರಿಶೀಲನೆ, ನಿರ್ವಹಣೆ ಮಾಡಲು ರಾಜ್ಯಮಟ್ಟದಲ್ಲಿ ಪ್ರಧಾನ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ರಾಜ್ಯಮಟ್ಟದ ಪರಿಶೀಲನಾ ಸಮಿತಿಯನ್ನು ರಚಿಸಲು ಹಾಗೂ ಇಲಾಖಾ ಅಧಿಕಾರಿಗಳ ಮತ್ತು ತಾಲ್ಲೂಕು ಪಂಚಾಯತಿ ಕಾರ್ಯನಿರ್ವಹಣ ಅಧಿಕಾರಿಗಳ ಅಧ್ಯಕ್ಷತೆಯಲ್ಲಿ ರಾಜ್ಯಮಟ್ಟದ ಯೋಜನೆ ನಿರ್ವಹಣೆ ಸಮಿತಿ, ಜಿಲ್ಲಾಮಟ್ಟದ ನಿರ್ವಹಣೆ ಸಮಿತಿ ಮತ್ತು ತಾಲ್ಲೂಕು ಮಟ್ಟದ ಸಮಿತಿಗಳನ್ನು ರಚಿಸಿ ಆಯುಕ್ತರು ತಿಳಿಸಿರುವಂತೆ ಕರ್ತವ್ಯಗಳನ್ನು ನಿರ್ವಹಿಸಲು ಸರ್ಕಾರದ ಅನುಮತಿಯನ್ನು ಕೋರಿದ್ದಾರೆ.

**ಆದೇಶ ಸಂಖ್ಯೆ: ಪಸಂಮೀ: 229:ಸಲೆವಿ 2010, ಬೆಂಗಳೂರು, ದಿನಾಂಕ: 07–01–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಕೂಲಂಕುಷವಾಗಿ ಪರಿಶೀಲಿಸಿದ ಸರ್ಕಾರ, ಕೇಂದ್ರ ಪುರಸ್ಕೃತ ಯೋಜನೆಯಾದ ನ್ಯಾಷನಲ್ ಕಂಟ್ರೋಲ್ ಪ್ರೋಗ್ರಾಂ ಆನ್ ಪಿಪಿಆರ್ (ಎನ್‌ಸಿಪಿಪಿಆರ್) ಮೇಲ್ವಿಚಾರಣೆ, ಪರಿಶೀಲನೆ ಮತ್ತು ಮೌಲ್ಯಮಾಪನ ಮಾಡಲು ಈ ಕೆಳಕಂಡ ಸದಸ್ಯರನ್ನೊಳಗೊಂಡಂತೆ ರಾಜ್ಯ ಮಟ್ಟದ ಪರಿಶೀಲನಾ ಸಮಿತಿ (Project Monitoring and Review Committee) ಯನ್ನು ರಚಿಸಲಾಗಿದ್ದು ಅದರ ಕೆಳಗೆ ಸದರಿ ಸಮಿತಿ ನಿರ್ವಹಿಸಬೇಕಾದ ಕರ್ತವ್ಯಗಳನ್ನು ಕೂಡ ನಿಗದಿಪಡಿಸಿದೆ.

**ರಾಜ್ಯಮಟ್ಟದ ಪರಿಶೀಲನಾ ಮತ್ತು ಮೇಲ್ವಿಚಾರಣಾ ಸಮಿತಿ:**

| | | | |
|---|---|---|---|
| 1. | ಪ್ರಧಾನ ಕಾರ್ಯದರ್ಶಿಗಳು, ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ | ... | ಅಧ್ಯಕ್ಷರು |
| 2. | ಆಯುಕ್ತರು, ಪಶುಪಾಲನೆ ಮತ್ತು ಪಶುವೈದ್ಯಕೀಯ ಸೇವಾ ಇಲಾಖೆ, ಬೆಂಗಳೂರು | ... | ಸದಸ್ಯರು |
| 3. | ನಿರ್ದೇಶಕರು, ಪಶುಪಾಲನೆ ಮತ್ತು ಪಶುವೈದ್ಯಕೀಯ ಸೇವಾ ಇಲಾಖೆ, ಬೆಂಗಳೂರು | ... | ಸದಸ್ಯರು |
| 4. | ನಿರ್ದೇಶಕರು, ಪಶು ಆರೋಗ್ಯ ಮತ್ತು ಜೈವಿಕ ಸಂಸ್ಥೆ, ಹೆಬ್ಬಾಳ, ಬೆಂಗಳೂರು | ... | ಸದಸ್ಯರು |
| 5. | ಅಪರ ನಿರ್ದೇಶಕರು, (ಜಾನುವಾರು ಆರೋಗ್ಯ) ಆಯುಕ್ತಾಲಯ, ಬೆಂಗಳೂರು | ... | ಸದಸ್ಯರು |
| 6. | ಜಂಟಿ ನಿರ್ದೇಶಕರು (ಅಭಿವೃದ್ಧಿ) ಆಯುಕ್ತಾಲಯ, ಬೆಂಗಳೂರು | ... | ಸದಸ್ಯ ಕಾರ್ಯದರ್ಶಿ |

**ಸಮಿತಿಯ ಕರ್ತವ್ಯಗಳು:**

1. ಯೋಜನೆಯ ಮೇಲ್ವಿಚಾರಣೆ, ಪ್ರಗತಿ ಪರಿಶೀಲನೆ ಮತ್ತು ಮೌಲ್ಯಮಾಪನ ಇತ್ಯಾದಿಗಳನ್ನೊಳಗೊಂಡಂತೆ ಯೋಜನೆ ಅನುಷ್ಠಾನದ ಬಗ್ಗೆ ಪರಿಶೀಲನೆ ಕೈಗೊಳ್ಳುವುದು.
2. ಯೋಜನೆಯ ಅನುಷ್ಠಾನ, ಸಂಸ್ಥೆಗಳಿಗೆ ಅನುಷ್ಠಾನದ ಬಗ್ಗೆ ಆಗಿಂದಾಗ್ಗೆ ಸಲಹೆ, ಸೂಚನೆ ನೀಡುವುದು
3. ಯೋಜನೆಯ ಬಗ್ಗೆ ಇನ್ನಿತರೆ ವಿಷಯಗಳ ಬಗ್ಗೆ ತೀರ್ಮಾನ ಕೈಗೊಳ್ಳುವುದು
4. ಪ್ರತಿ ತಿಂಗಳಿಗೊಮ್ಮೆ ಅಥವಾ ಸಂದರ್ಭಾನುಸಾರ ಸಭೆ ನಡೆಸಿ ಪರಿಶೀಲಿಸುವುದು

ಇನ್ನುಳಿದಂತೆ, ಇತರೆ ರಾಜ್ಯಮಟ್ಟದ ಯೋಜನಾ ನಿರ್ವಹಣೆ ಸಮಿತಿ, ಜಿಲ್ಲಾಮಟ್ಟದ ಯೋಜನೆ ನಿರ್ವಹಣಾ ಸಮಿತಿ ಹಾಗೂ ತಾಲ್ಲೂಕು ಮಟ್ಟದ ಯೋಜನಾ ನಿರ್ವಹಣೆ ಸಮಿತಿಗಳನ್ನು ಮತ್ತು ಅವುಗಳು ನಿರ್ವಹಿಸಬೇಕಾದ ಕರ್ತವ್ಯಗಳ ಬಗ್ಗೆ ಆಯುಕ್ತರು, ಪಶುಪಾಲನೆ ಮತ್ತು ಪಶುವೈದ್ಯಕೀಯ ಸೇವಾ ಇಲಾಖೆ, ಬೆಂಗಳೂರು ಇವರು ಕ್ರಮಾಂಕ (3)ರಲ್ಲಿ ಓದಲಾದ ಪತ್ರದಲ್ಲಿ ನಮೂದಿಸಿರುವಂತೆ ಇಲಾಖೆಯ ವಿವಿಧ ಅಧಿಕಾರಿಗಳ ಹಾಗೂ ತಾಲ್ಲೂಕು ಪಂಚಾಯತಿ ಕಾರ್ಯನಿರ್ವಹಣಾ ಅಧಿಕಾರಿಗಳ ಅಧ್ಯಕ್ಷತೆಯಲ್ಲಿ ರಾಜ್ಯ, ಜಿಲ್ಲಾ ಮತ್ತು ತಾಲ್ಲೂಕು ಮಟ್ಟದ ಸಮಿತಿಗಳನ್ನು ರಚಿಸಿ ಸೂಕ್ತ ಆದೇಶಗಳನ್ನು ಇಲಾಖಾ ವತಿಯಿಂದಲೇ ಹೊರಡಿಸಲು ಅನುಮತಿ ನೀಡಲಾಗಿದೆ.

ಈ ಬಗ್ಗೆ ಒಂದು ವರ್ಷ ಮುಗಿದ ನಂತರ ಸದರಿ ಯೋಜನೆಯ ಕಾರ್ಯಕ್ರಮಗಳನ್ನು ಪುನರ್ ವಿಮರ್ಶಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ಕೆ. ಶ್ರೀನಿವಾಸಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ
(ಪಶುಸಂಗೋಪನೆ)

ಪಿ.ಆರ್. ನಂ. 284

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

### ತಿದ್ದುಪಡಿ ಆದೇಶ

ಸಂಖ್ಯೆ: ಸಿಐ/461/ಎಸ್‌ಪಿಐ/2010, ಬೆಂಗಳೂರು, ದಿನಾಂಕ 31-12-2010

**ವಿಷಯ** : ಮೆ॥ ಟಾಟಾ ಮಾರ್ಕೊಪೋಲೊ ಮೋಟಾರ್ಸ್ ಲಿ., ರವರಿಗೆ (ಟಿಎಂಎಂಎಲ್) ಮೌಲ್ಯಾಧಾರಿತ ತೆರಿಗೆ ಮೇಲೆ ಮೃದುಸಾಲ ಒದಗಿಸುವ ಬಗ್ಗೆ

**ಓದಲಾಗಿದೆ** : 1. ಸರ್ಕಾರಿ ಆದೇಶ ಸಂಖ್ಯೆ: ಸಿಐ/563/ಎಸ್‌ಪಿಐ/2005, ದಿನಾಂಕ 03-09-2007
2) ತಿದ್ದುಪಡಿ ಆದೇಶ ದಿನಾಂಕ 13-12-2010
3) ಜಂಟಿ ನಿರ್ದೇಶಕರು (ಕೈ.ಅ) ಇವರ ಪತ್ರ ಸಂಖ್ಯೆ: ಕೈಅ/ಇ1/74/ಟಿ.ಎಂ.ಎಂ.ಎಲ್./ ಧಾರಾ/10-11, ದಿನಾಂಕ 27-12-2010.

ಸರ್ಕಾರದ ಆದೇಶ ಸಂಖ್ಯೆ: ಸಿಐ 461 ಎಸ್‌ಪಿಐ 2010, ದಿನಾಂಕ 07-12-2010ರಂದು ಹೊರಡಿಸಿರುವ ಆದೇಶದ ಭಾಗದ ಕಂಡಿಕೆ 3ರಲ್ಲಿ ಲೆಕ್ಕ ಶೀರ್ಷಿಕೆ **"6852-02-800-0-01"** Loan against VAT payment to industrial units" ಬದಲಾಗಿ ಲೆಕ್ಕ ಶೀರ್ಷಿಕೆ **"6852-02-800-0-01"** Loan against VAT payment to industrial units" "Objective Code-394" plan ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ. ವಿ. ಶ್ರೀನಿವಾಸ ದೀಕ್ಷಿತ್**
ಪೀಠಾಧಿಕಾರಿ (ತಾಂತ್ರಿಕ ಕೋಶ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

ಪಿ.ಆರ್. ನಂ. 285

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

### ಸುತ್ತೋಲೆ

ಸಂಖ್ಯೆ: ಸಿಆಸುಇ 84 ಇಆಇ 2010, ಬೆಂಗಳೂರು, ದಿನಾಂಕ 24-01-2011

**ವಿಷಯ** : ಇ-ಆಡಳಿತದ ಅನ್ವಯಿಕೆಗಳಿಗಾಗಿ ಡಿಜಿಟಲ್ ಸಹಿಗಳನ್ನು ಬಳಸುವ ಕುರಿತು ಕೇಂದ್ರ ಸರ್ಕಾರ ನೀಡಿದ ಮಾರ್ಗಸೂಚಿಗಳನ್ನು ಅಳವಡಿಸುವ ಬಗ್ಗೆ.

**ಉಲ್ಲೇಖ** : 1. ದಿನಾಂಕ 31-07-2010ರ ಸರ್ಕಾರದ ಸುತ್ತೋಲೆ ಸಂಖ್ಯೆ: ಸಿಆಸುಇ 4 ಇಆಇ 2010
2. ಜಂಟಿ ಕಾರ್ಯದರ್ಶಿ, ಕೇಂದ್ರ ಸರ್ಕಾರದ ಮಾಹಿತಿ ತಂತ್ರಜ್ಞಾನ ಇಲಾಖೆ, ನವದೆಹಲಿ. ಇವರ ದಿನಾಂಕ 21-12-2010ರ ಅ.ಸ. ಪತ್ರ ಸಂಖ್ಯೆ: 2(38)/2009-ಇಜಿ-II

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮೇಲೆ (1)ರಲ್ಲಿ ಉಲ್ಲೇಖಿಸಿದ ದಿನಾಂಕ 31-06-2010ರ ಸುತ್ತೋಲೆಯ ಕಡೆಗೆ ಗಮನ ಸೆಳೆಯಲಾಗಿದೆ.

2. 'ಭೂಮಿ', 'ನೆಮ್ಮದಿ' 'ಇ-ಸಂಗ್ರಹಣೆ ಇತ್ಯಾದಿ ಯೋಜನೆಗಳಿಗೆ ಸಂಬಂಧಿಸಿದಂತೆ ಸರ್ಕಾರದ ಅಧಿಕಾರಿಗಳು ಡಿಜಿಟಲ್ ಸಹಿಗಳನ್ನು ಬಳಸುವುದು ವಾಡಿಕೆಯಾಗಿದೆ. ವಿವಿಧ ಇಲಾಖೆ/ಸಂಸ್ಥೆಗಳ ಇ-ಆಡಳಿತ ಯೋಜನೆಗಳಿಗೆ ಸಂಬಂಧಿಸಿದಂತೆ ಡಿಜಿಟಲ್ ಸಹಿಗಳನ್ನು ಹೆಚ್ಚು ಹೆಚ್ಚಾಗಿ ಬಳಸುವ ಸಾಧ್ಯತೆ ಇದೆ. ಇ-ಆಡಳಿತದ ಅನ್ವಯಿಕೆಗಳಿಗಾಗಿ ಡಿಜಿಟಲ್ ಸಹಿಗಳ ಬಳಕೆ. ಅವುಗಳನ್ನು ಪಡೆಯುವ ಹಾಗೂ ದೃಢೀಕರಿಸುವ ಪದ್ಧತಿ ಮತ್ತು ಅವುಗಳ ಕಾನೂನಿನ ಸಿಂಧುತ್ವ ಇತ್ಯಾದಿಯ ಬಗ್ಗೆ "Guidelines for Usage of Digital Signatures in e-Governance-Version 1.0 December 2010" ಎಂಬುವ ಮಾರ್ಗಸೂಚಿಗಳನ್ನು ಕೇಂದ್ರ ಸರ್ಕಾರ ತಯಾರಿಸಿದ್ದು, ಅದರ ಪ್ರತಿಯನ್ನು ಮೇಲೆ (2)ರಲ್ಲಿ ಉಲ್ಲೇಖಿಸಿದ ದಿನಾಂಕ 21-12-2010ರ ಪತ್ರದೊಂದಿಗೆ ಲಗತ್ತಿಸಿದೆ. ಅದನ್ನು ಈ ಸುತ್ತೋಲೆಗೆ ಲಗತ್ತಿಸಿದೆ. ಅದರಲ್ಲಿ ಮತ್ತೆ ಮತ್ತೆ ಕೇಳುವ ಪ್ರಶ್ನೆಗಳು [Frequently asked Questions (FAQs)] ಸಹ ಒಳಗೊಂಡಿರುತ್ತವೆ. ಈ ಮಾರ್ಗಸೂಚಿಗಳನ್ನು ಸಂಬಂಧಿಸಿದ ಅಧಿಕಾರಿಗಳು ಸಿದ್ಧಗಣಕವಾಗಿ (as a ready reckoner) ಬಳಸಬಹುದಾಗಿದೆ.

3. ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು/ಕಾರ್ಯದರ್ಶಿಗಳು ಹಾಗೂ ಅವರ ಕಾರ್ಯ ವ್ಯಾಪ್ತಿಯೊಳಗೆ ಬರುವ ಕ್ಷೇತ್ರ ಇಲಾಖೆಗಳ ಇಲಾಖಾ ಮುಖ್ಯಸ್ಥರುಗಳು ಸದರಿ ಮಾರ್ಗಸೂಚಿಗಳನ್ನು ಅನುಸರಿಸಬೇಕೆಂದು ಹಾಗೂ ಅವುಗಳನ್ನು ಅವರವರ ಕಾರ್ಯವ್ಯಾಪ್ತಿಯೊಳಗೆ ಬರುವ ಸಂಬಂಧಿಸಿದ ಎಲ್ಲಾ ಅಧಿಕಾರಿಗಳ ಗಮನಕ್ಕೆ ತರಬೇಕೆಂದು ಈ ಮೂಲಕ ಕೋರಿದೆ.

**ಪ್ರಸನ್ನ ಕುಮಾರ್ ಜಿ.ಎಸ್.**
ಪೀಠಾಧಿಕಾರಿ-1, (ಇ-ಆಡಳಿತ)
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ

ಪಿ.ಆರ್. ನಂ. 288

## ಶಿಕ್ಷಣ ಸಚಿವಾಲಯ

**ವಿಷಯ** : 2010-11ನೇ ಸಾಲಿನಲ್ಲಿ ಸರ್ಕಾರಿ ಹಾಗೂ ಅನುದಾನಿತ ಶಾಲೆಗಳಲ್ಲಿ 8ನೆಯ ತರಗತಿಯಲ್ಲಿ ವ್ಯಾಸಂಗ ಮಾಡುತ್ತಿರುವ ಎಲ್ಲಾ ವಿದ್ಯಾರ್ಥಿಗಳಿಗೆ ಉಚಿತವಾಗಿ ಬೈಸಿಕಲ್‌ಗಳನ್ನು ವಿತರಿಸುವ ಬಗ್ಗೆ.

**ಓದಲಾಗಿದೆ** : 1) ಸರ್ಕಾರಿ ಆದೇಶ ಸಂಖ್ಯೆ: ಇಡಿ 99 ಯೋಯೋಕ 2010, ದಿನಾಂಕ 03-04-2010
2) ಸರ್ಕಾರಿ ಆದೇಶ ಸಂಖ್ಯೆ: ಇಡಿ 142 ಯೋಯೋಕ 2010, ದಿನಾಂಕ 29-06-2010
3) ಸರ್ಕಾರಿ ಪತ್ರದ ಸಂಖ್ಯೆ: ಇಡಿ 235 ಯೋಯೋಕ 2010, ದಿನಾಂಕ 30-08-2010
4) ಸಾರ್ವಜನಿಕ ಶಿಕ್ಷಣ ಇಲಾಖೆ ಆಯುಕ್ತರು, ಬೆಂಗಳೂರು ಇವರ ಪ್ರಸ್ತಾವನೆ ಸಂಖ್ಯೆ: ಯೋ-10ಉ.ಬೈ.ವಿ.ಯೋ.ಟೆಂಪ್ರ: 01/2010-11, ದಿನಾಂಕ 12-11-2010.

**ಪ್ರಸ್ತಾವನೆ :**

1. ಮೇಲೆ 1 ರಲ್ಲಿ ಓದಲಾದ ದಿನಾಂಕ 03-04-2010ರ ಆದೇಶದಲ್ಲಿ 2010-11ನೇ ಸಾಲಿಗೆ ಸರ್ಕಾರಿ ಹಾಗೂ ಅನುದಾನಿತ ಶಾಲೆಗಳಲ್ಲಿ 8ನೇ ತರಗತಿಯಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ಉಚಿತ ಬೈಸಿಕಲ್ ಸರಬರಾಜು ಮಾಡುವ ಯೋಜನೆಯನ್ನು ಮುಂದುವರೆಸಲು ಸರ್ಕಾರವು ಅನುಮೋದನೆ ನೀಡಿತು.

2. ಮೇಲೆ 2 ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ 2010–11ನೇ ಸಾಲಿಗೆ ಉಚಿತ ಬೈಸಿಕಲ್ ಸರಬರಾಜಿಗಾಗಿ ಪ್ರಸ್ತಾವನೆ ಸಿದ್ಧಪಡಿಸಿ ಟೆಂಡರ್ ಪ್ರಕ್ರಿಯೆ ಪ್ರಾರಂಭಿಸಲು ಆಯುಕ್ತರು ಸಾರ್ವಜನಿಕ ಶಿಕ್ಷಣ ಇಲಾಖೆ ಇವರಿಗೆ ಸರ್ಕಾರದ ಅನುಮೋದನೆ ನೀಡಲಾಯಿತು.

3. ಮೇಲೆ 3ರಲ್ಲಿ ಓದಲಾದ ಸರ್ಕಾರದ ಪತ್ರದಲ್ಲಿ 2010–11ನೇ ಸಾಲಿನಲ್ಲಿ ಬೈಸಿಕಲ್‌ಗಳ ಖರೀದಿಗಾಗಿ ಟೆಂಡರ್ ಪ್ರಕ್ರಿಯೆಯಲ್ಲಿ ಬೈಸಿಕಲ್‌ಗಳ ತಯಾರಿಕಾ ಕಂಪನಿಗಳ ವಾರ್ಷಿಕ ವಹಿವಾಟು ಕುರಿತಂತೆ ಹಿಂದಿನ ವರ್ಷದಲ್ಲಿ ನಿಗದಿಪಡಿಸಿದ್ದ ಷರತ್ತುಗಳನ್ನು ಮುಂದುವರೆಸಲು ಮತ್ತು 30 ದಿನಗಳ ಕಾಲಾವಕಾಶ ನಿಗದಿಪಡಿಸಿ ಅಲ್ಪಾವಧಿ ಟೆಂಡರ್ ಕರೆಯಲು ಅನುಮೋದನೆ ನೀಡಲಾಗಿತ್ತು.

4. ಮೇಲೆ 4 ರಲ್ಲಿ ಓದಲಾದ ತಮ್ಮ ಪ್ರಸ್ತಾವನೆಯಲ್ಲಿ ಟೆಂಡರ್ ಪ್ರಕ್ರಿಯೆಯಲ್ಲಿ ದರ ಸಂಧಾನ ಸಭೆಗಳನ್ನು ನಡೆಸಿದ ನಂತರವೂ ಪ್ರತಿ ವಿಭಾಗದಲ್ಲಿ ಎಲ್1 ಆಯ್ಕೆಯಾದ ಸಂಸ್ಥೆಗಳು ಈ ಕೆಳಕಂಡಂತೆ ಅಂತಿಮ ದರಗಳನ್ನು ನಿಗದಿ ಪಡಿಸಿರುತ್ತವೆ.

| | | |
|---|---|---|
| ಬೆಂಗಳೂರು ವಿಭಾಗ | ಮೆ॥ ಏವನ್ ಸೈಕಲ್ಸ್ ಲಿ., ಲೂಧಿಯಾನ | ರೂ. 2657.00 |
| ಮೈಸೂರು ವಿಭಾಗ | ಮೆ॥ ಅಟ್ಲಾಸ್ ಸೈಕಲ್ಸ್ (ಹರಿಯಾಣ) ಲಿ, ಮಧ್ಯಪ್ರದೇಶ | ರೂ. 2657.00 |
| ಬೆಳಗಾಂ ವಿಭಾಗ | ಮೆ॥ ಹಿರೋ ಸೈಕಲ್ಸ್ ಲಿ., ಲೂಧಿಯಾನ | ರೂ. 2657.00 |
| ಗುಲ್ಬರ್ಗಾ ವಿಭಾಗ | ಮೆ॥ ಟಿ. ಐ. ಸೈಕಲ್ಸ್ ಆಫ್ ಇಂಡಿಯಾ, ಚೆನ್ನೈ | ರೂ. 2657.00 |

5. ಈಗ ಅಂತಿಮವಾಗಿ ನಿಗದಿಪಡಿಸಿರುವ ದರವು ಹಿಂದಿನ ಸಾಲಿನ ದರಕ್ಕೆ ಹೋಲಿಸಿದಲ್ಲಿ ಪ್ರತಿ ಬೈಸಿಕಲ್‌ಗೆ ರೂ. 267 ಹೆಚ್ಚುವರಿಯಾಗುತ್ತದೆ. ಆದಾಗ್ಯೂ ಬೈಸಿಕಲ್ ತಯಾರಿಕಾ ಕಂಪನಿಗಳು ಬೈಸಿಕಲ್‌ಗಳ ಯೂನಿಟ್ ಬೆಲೆಯಲ್ಲಿ ಕಡಮೆ ಮಾಡಿರುವ ಮೊತ್ತವು ಗಣನೀಯ ಪ್ರಮಾಣದಲ್ಲಿ ಇಲ್ಲವೆಂದು ಕಂಡು ಬಂದಲ್ಲಿ ಸರ್ಕಾರದ ಮಟ್ಟದಲ್ಲಿ ಉನ್ನತ ಮಟ್ಟದ ಸಮಿತಿಯೊಂದನ್ನು ರಚಿಸಿ ಸದರಿ ಸಮಿತಿಯ ಪುನಃ ದರ ಸಂಧಾನ ನಡೆಸಬಹುದಾಗಿದೆ ಎಂದು ತಿಳಿಸಿರುತ್ತಾರೆ.

6. ಸಾರ್ವಜನಿಕ ಶಿಕ್ಷಣ ಆಯುಕ್ತರು ಸಲ್ಲಿಸಿರುವ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಕೂಲಂಕಷವಾಗಿ ಪರಿಶೀಲಿಸಲಾಗಿದ್ದು ಅದರಂತೆ ಈ ಕೆಳಕಂಡಂತೆ ಆದೇಶ–

**ಸರ್ಕಾರಿ ಆದೇಶ ಸಂಖ್ಯೆ: ಇಡಿ 259 ಯೋಯೋಕ 2010, ಬೆಂಗಳೂರು, ದಿನಾಂಕ: 22–01–2011**

7. ಮೇಲೆ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ 2010–11ನೇ ಸಾಲಿನಲ್ಲಿ ಉಚಿತ ಬೈಸಿಕಲ್‌ಗಳನ್ನು ವಿತರಿಸುವ ಸಂಬಂಧ ಈ ಕೆಳಕಂಡಂತೆ ಆದೇಶಿಸಲಾಗಿದೆ:–

    1. 2010–11ನೇ ಸಾಲಿನಲ್ಲಿ ಉಚಿತ ಬೈಸಿಕಲ್‌ಗಳನ್ನು ಖರೀದಿಸಲು ಕರೆದಿರುವ ಟೆಂಡರ್‌ನ್ನು ರದ್ದುಗೊಳಿಸಲು ಸಾರ್ವಜನಿಕ ಶಿಕ್ಷಣ ಆಯುಕ್ತರಿಗೆ ಅನುಮೋದನೆ ನೀಡಿದೆ.
    2. ಉಚಿತ ಬೈಸಿಕಲ್‌ಗಳ ಖರೀದಿಗಾಗಿ ಎಲ್ಲಾ ವಲಯಗಳಿಗೆ ಸಂಬಂಧಿಸಿದಂತೆ ಇ–ಸಂಗ್ರಹಣಾ ವೇದಿಕೆ ಮೂಲಕ ಒಂದೇ ಟೆಂಡರ್‌ನ್ನು ಟೆಂಡರ್ ಕರೆಯುವ ಕಾಲಾವಧಿಯನ್ನು 20 (ಇಪ್ಪತ್ತು) ದಿನಗಳಿಗೆ ಸೀಮಿತಗೊಳಿಸಿ ಅಲ್ಪಾವಧಿ ಟೆಂಡರ್ ಕರೆಯಲು ಸಾರ್ವಜನಿಕ ಶಿಕ್ಷಣ ಆಯುಕ್ತರು, ಬೆಂಗಳೂರು ರವರಿಗೆ ಅನುಮೋದನೆ ನೀಡಿದೆ.

8. ಸದರಿ ಆದೇಶವನ್ನು ಆರ್ಥಿಕ ಇಲಾಖೆಯು ತನ್ನ ಟಿಪ್ಪಣಿ ಸಂಖ್ಯೆ: ಆಇ 880 ವೆಚ್ಚ 8/2010, ದಿನಾಂಕ 29–12–2010ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಐ. ಎಫ್. ಮಾಗಿ**
ವಿಶೇಷಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ
ಶಿಕ್ಷಣ ಇಲಾಖೆ (ಯೋಜನೆ)

ಪಿ.ಆರ್. ನಂ. 289

## ಕಂದಾಯ ಸಚಿವಾಲಯ

**ವಿಷಯ :** ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ಮುನ್ನೇಕೊಳಲು ಗ್ರಾಮದ ಸ.ನಂ. 23 ರಲ್ಲಿನ 18 ಗುಂಟೆ ಜಮೀನನ್ನು ಮೆ॥ ಉಷಾ ಮಾರ್ಟಿನ್ ಪವರ್ ಕಂಪನಿ ಲಿಮಿಟೆಡ್ ಇವರಿಗೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :**
1) ಮೆ॥ ಉಷಾ ಮಾರ್ಟಿನ್ ಪವರ್ ಕಂಪನಿ ಲಿಮಿಟೆಡ್ ಇವರ ಪರವಾಗಿ ಜಿ.ಪಿ.ಎ. ಹೋಲ್ಡರ್ ಮೆ॥ ರೋಹನ್ ಬಿಲ್ಡರ್ಸ್‌ರವರ ಮನವಿ ದಿ: 29.09.2007.
2) ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಎಲ್‌ಎನ್‌ಡಿ (ಪೂ) ಸಿಆರ್ 207/07–08, ದಿ: 02.02.2009.
3) ಸರ್ಕಾರದ ಅಧಿಸೂಚನೆ ಸಂಖ್ಯೆ: ಆರ್‌ಡಿ 148 ಎಲ್‌ಜಿಬಿ 2009, ದಿ: 21.12.2009.
4) ಸರ್ಕಾರದ ಪತ್ರ ಸಂಖ್ಯೆ: ಆರ್‌ಡಿ 148 ಎಲ್‌ಜಿಬಿ 2009, ದಿ: 15.05.2010.

**ಪ್ರಸ್ತಾವನೆ:**

ಮೆ॥ ಉಷಾ ಮಾರ್ಟಿನ್ ಪವರ್ ಕಂಪನಿ ಲಿಮಿಟೆಡ್ ಇವರ ಪರವಾಗಿ ಜಿ.ಪಿ.ಎ. ಹೋಲ್ಡರ್, ಮೆ॥ ರೋಹನ್ ಬಿಲ್ಡರ್ಸ್ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿ: 29.09.2007ರ ಮನವಿಯಲ್ಲಿ ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ಮುನ್ನೇಕೊಳಲು ಗ್ರಾಮ ಸ.ನಂ. 22, 23, 24 ಮತ್ತು 28ರ ಒಟ್ಟು 7 ಎಕರೆ 33 ಗುಂಟೆ ಭೂ ಪರಿವರ್ತಿತ ಜಮೀನನ್ನು ಮೆ॥ ಉಷಾ ಮಾರ್ಟಿನ್ ಪವರ್ ಕಂಪನಿ ಲಿಮಿಟೆಡ್ ರವರು ಜಂಟಿಯಾಗಿ ಅಭಿವೃದ್ಧಿಪಡಿಸಲು ಮೆ॥ ರೋಹನ್ ಬಿಲ್ಡರ್ಸ್ ರವರಿಗೆ ನೀಡಲಾಗಿದ್ದು, ಈ ಪೈಕಿ ಸ.ನಂ. 23ರಲ್ಲಿನ ಹಳ್ಳದ ಬಿ ಖರಾಬ್ ಜಮೀನನ್ನು ಮಂಜೂರು ಮಾಡುವಂತೆ ಕೋರಿರುತ್ತಾರೆ.

2) ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ದಿ: 02.02.2009ರ ಪತ್ರದಲ್ಲಿ ಸರ್ಕಾರಕ್ಕೆ ವರದಿಯನ್ನು ಸಲ್ಲಿಸಿ, ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ಮುನ್ನೇಕೊಳಲು ಗ್ರಾಮದ ಸ.ನಂ. 23ರಲ್ಲಿ 0.18 ಗುಂಟೆ ಬಿ ಖರಾಬ್ ಹಳ್ಳದ ಜಮೀನಿರುವುದಾಗಿ ತಿಳಿಸಿರುತ್ತಾರೆ. ಸದರಿ ಬಿ ಖರಾಬ್ ಜಮೀನು ನಿಗದಿಪಡಿಸಿದ ಉದ್ದೇಶಕ್ಕೆ ಬಳಕೆಯಾಗುತ್ತಿಲ್ಲವೆಂದು ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ಇವರು ವರದಿ ನೀಡಿದ ಹಿನ್ನೆಲೆಯಲ್ಲಿ ಈ ಜಮೀನನ್ನು ಸಾರ್ವಜನಿಕ ಹಕ್ಕಿನಿಂದ ವಿಹಿತಗೊಳಿಸಲು ಕರ್ನಾಟಕ ಭೂ ಕಂದಾಯ ಕಾಯ್ದೆಯ ಕಲಂ 68(1)ರನ್ವಯ ದಿ: 29.01.2008ರಲ್ಲಿ ತಹಶೀಲ್ದಾರ್, ಬೆಂಗಳೂರು ಪೂರ್ವ ತಾಲ್ಲೂಕು ಇವರು ನಮೂನೆ 27ರಲ್ಲಿ

ಸಾರ್ವಜನಿಕ ಪ್ರಕಟಣೆಯನ್ನು ಹೊರಡಿಸಿರುತ್ತಾರೆ. ಸದರಿ ಸಾರ್ವಜನಿಕ ಪ್ರಕಟಣೆಗೆ ಅನುಗುಣವಾಗಿ ಯಾವುದೇ ಆಕ್ಷೇಪಣೆಗಳು ಬಂದಿರುವುದಿಲ್ಲವೆಂದು ಜಿಲ್ಲಾಧಿಕಾರಿಗಳು ವರದಿ ಮಾಡಿರುತ್ತಾರೆ. ಆದ್ದರಿಂದ ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ದಿ.21.12.2009ರ ಅಧಿಸೂಚನೆಯಲ್ಲಿ ಸದರಿ ಬಿ ಖರಾಬ್ ಹಳ್ಳದ ಜಮೀನನ್ನು ಸಾರ್ವಜನಿಕ ಹಕ್ಕಿನಿಂದ ವಿಹಿತಗೊಳಿಸಲು ನಮೂನೆ 29ರಲ್ಲಿ ಅಂತಿಮ ಅಧಿಸೂಚನೆಯನ್ನು ಹೊರಡಿಸಲಾಗಿರುತ್ತದೆ.

3) ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಸರ್ಕಾರದ ಪತ್ರದ ದಿ: 15.05.2010ರಲ್ಲಿ ಸದರಿ ಜಮೀನನ್ನು ಸರ್ಕಾರ ಅಥವಾ ಸರ್ಕಾರಿ ಸಂಸ್ಥೆಗಳಿಗೆ ಉಪಯೋಗ ಮಾಡಿಕೊಳ್ಳಬೇಕೆನ್ನುವ ಬಗ್ಗೆ ಪರಿಶೀಲಿಸಲು ನಿರ್ಧರಿಸಿ, ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ಮುನ್ನೇಕೊಳಲು ಗ್ರಾಮದ ಸ.ನಂ. 23ರಲ್ಲಿ 18 ಗುಂಟೆ ಜಮೀನನ್ನು ಮೆ॥ ಉಷಾ ಮಾರ್ಟಿನ್ ಪವರ್ ಕಂಪನಿ ಲಿಮಿಟೆಡ್ ಇವರಿಗೆ ಮಂಜೂರು ಮಾಡುವ ಪ್ರಸ್ತಾವನೆಯನ್ನು ಸರ್ಕಾರವು ತಿರಸ್ಕರಿಸಲಾಗಿದೆ ಎಂದು ವಿಶೇಷ ಜಿಲ್ಲಾಧಿಕಾರಿಗಳಿಗೆ ತಿಳಿಸಲಾಗಿತ್ತು.

ಪ್ರಸ್ತಾವನೆಯನ್ನು ಸರ್ಕಾರವು ಮರು ಪರಿಶೀಲಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 148 ಎಲ್‌ಜಿಬಿ 2009, ಬೆಂಗಳೂರು, ದಿನಾಂಕ 24–02–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರದ ಪತ್ರ ಸಂಖ್ಯೆ: ಆರ್‌ಡಿ 148 ಎಲ್‌ಜಿಬಿ 2009, ದಿ: 15.05.2010ನ್ನು ರದ್ದುಪಡಿಸಿ ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ಮುನ್ನೇಕೊಳಲು ಗ್ರಾಮದ ಸ.ನಂ. 23ರಲ್ಲಿನ 0.18 ಗುಂಟೆ ಜಮೀನನ್ನು ಮೆ॥ ಉಷಾ ಮಾರ್ಟಿನ್ ಪವರ್ ಕಂಪನಿ ಲಿಮಿಟೆಡ್ ಇವರಿಗೆ ಪ್ರಸಕ್ತ ಮಾರುಕಟ್ಟೆ ದರ ಹಾಗೂ ನಿಯಮಾನುಸಾರ ಇತರೇ ಶುಲ್ಕ ವಿಧಿಸಿ ಮಂಜೂರು ಮಾಡಲು ಸರ್ಕಾರವು ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 94 ವೆಚ್ಚ–7/2010, ದಿ: 11.02.2010ರಲ್ಲಿ ನೀಡಿದ ಸಹಮತಿಯನುಸಾರ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಗೀತಾ ರಮೇಶ್**
ಸರ್ಕಾರದ ಉಪ ಕಾರ್ಯದರ್ಶಿ
ಕಂದಾಯ ಇಲಾಖೆ (ಭೂ.ಮಂ ಮತ್ತು ಭೂ ಕಂ)

ಪಿ.ಆರ್. 511

## ಇಂಧನ ಸಚಿವಾಲಯ

**ವಿಷಯ** : ಜಸ್ಟೀಸ್ ವಿ. ಪಿ. ಮೋಹನ್ ಕುಮಾರ್‌ರವರ ಕಾರ್ಯದರ್ಶಿ ಶ್ರೀ ಹೆಚ್. ಪಿ. ದೇಸಿಗೌಡ ಇವರ ಮರುನೇಮಕಾತಿ ವೇತನವನ್ನು ನಿಗದಿಪಡಿಸುವ ಬಗ್ಗೆ.

**ಓದಲಾಗಿದೆ** : 1) ಸರ್ಕಾರದ ಆದೇಶ ಸಂಖ್ಯೆ: ಇಎನ್ 125 ಪಿಪಿಸಿ 2009, ದಿನಾಂಕ 13–10–2009, 03–02–2010, 14–06–2010 ಮತ್ತು 28–12–2010.
2) ಸರ್ಕಾರಿ ಆದೇಶ ಸಂಖ್ಯೆ: ಇಎನ್ 125 ಪಿಪಿಸಿ 2009, ದಿನಾಂಕ 04–12–2009
3) ಪತ್ರ ಸಂಖ್ಯೆ: ವಿ.ಪಿ.ಎಂ.ಐ. 238/2010, ದಿನಾಂಕ 04–12–2010
4) ಆರ್ಥಿಕ ಇಲಾಖೆಯ ಹಿಂಬರಹ ಸಂಖ್ಯೆ: ಆಇ 2110 ವೆಚ್ಚ–1/2010, ದಿನಾಂಕ 17–01–2011.

**ಪ್ರಸ್ತಾವನೆ :**

ಮೇಲೆ ಓದಲಾದ ಸರ್ಕಾರಿ ಆದೇಶ (1)ರಲ್ಲಿ ಉಚ್ಚ ನ್ಯಾಯಾಲಯದ ನಿವೃತ್ತ ನ್ಯಾಯಾಧೀಶರಾದ ಜಸ್ಟೀಸ್ ಶ್ರೀ ವಿ. ಪಿ. ಮೋಹನ್ ಕುಮಾರ್ ರವರನ್ನು ಕರ್ನಾಟಕ ವಿದ್ಯುತ್ ನಿಗಮ ನಿಯಮಿತದಲ್ಲಿ ಕಲ್ಲಿದ್ದಲನ್ನು ಖರೀದಿಸುವಲ್ಲಿ ಹಾಗೂ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದಲ್ಲಿ ಪವರ್ ಟ್ರಾನ್ಸ್‌ಫಾರ್ಮರ್ ಖರೀದಿಸುವಲ್ಲಿ ನಡೆದಿರುವ ಅಕ್ರಮಗಳ ಬಗ್ಗೆ ವಿಚಾರಣೆಯನ್ನು ನಡೆಸಲು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿದೆ. ಸರ್ಕಾರಿ ಆದೇಶ ಸಂಖ್ಯೆ: ಇಎನ್ 125 ಪಿಪಿಸಿ 2009, ದಿನಾಂಕ 03–02–2010 ರಲ್ಲಿ ವಿಚಾರಣೆಯ ಕಾಲಾವಧಿಯನ್ನು ದಿನಾಂಕ 13–01–2010 ರಿಂದ ಮುಂದಿನ 6 ತಿಂಗಳವರೆಗೆ ಮತ್ತು ಸರ್ಕಾರಿ ಆದೇಶ ಸಂಖ್ಯೆ: ಇಎನ್ 125 ಪಿಪಿಸಿ 2009, ದಿನಾಂಕ 14–06–2010 ರಲ್ಲಿ 14–07–2010 ರಿಂದ 31–12–2010 ರವರೆಗೆ 5½ ತಿಂಗಳಿಗೆ ಕಾಲಾವಧಿಯನ್ನು ವಿಸ್ತರಿಸಲಾಗಿತ್ತು. ಪುನಃ ಸರ್ಕಾರಿ ಆದೇಶ ಸಂಖ್ಯೆ: ಇಎನ್ 125 ಪಿಪಿಸಿ 2009 ದಿನಾಂಕ 28–12–2010 ರಲ್ಲಿ 01–01–2011 ರಿಂದ 6 ತಿಂಗಳವರೆಗೆ ಕಾಲಾವಧಿಯನ್ನು ವಿಸ್ತರಿಸಲಾಗಿದೆ.

ಮೇಲೆ ಓದಲಾದ ಸರ್ಕಾರಿ ಆದೇಶ (2)ರಲ್ಲಿ ನ್ಯಾಯಮೂರ್ತಿ ಶ್ರೀ ವಿ. ಪಿ. ಮೋಹನ್ ಕುಮಾರ್, ವಿಚಾರಣಾಧಿಕಾರಿಯವರ ಕಾರ್ಯಾಲಯಕ್ಕೆ ಕಾರ್ಯದರ್ಶಿ ಹಾಗೂ ಇತರೆ ಹುದ್ದೆಗಳನ್ನು ನೇಮಿಸಿಕೊಳ್ಳಲು ಅನುಮೋದನೆಯನ್ನು ನೀಡಲಾಗಿತ್ತು.

ಮೇಲೆ ಓದಲಾದ ಪತ್ರ (3)ರಲ್ಲಿ ಶ್ರೀ ಶ್ರೀವತ್ಸ ಕೆದಿಲಾಯ, ಜಸ್ಟೀಸ್ ಶ್ರೀ ವಿ. ಪಿ. ಮೋಹನ್ ಕುಮಾರ್‌ರವರ ಕಾರ್ಯದರ್ಶಿ ಇವರು ದಿನಾಂಕ 30–11–2010ರ ಅಪರಾಹ್ನ ಜಾರಿಗೆ ಬರುವಂತೆ ಕಾರ್ಯದರ್ಶಿ ಹುದ್ದೆಗೆ ರಾಜೀನಾಮೆಯನ್ನು ನೀಡಿರುತ್ತಾರೆ ಹಾಗೂ ಇದನ್ನು ಜಸ್ಟೀಸ್ ಶ್ರೀ ವಿ. ಪಿ. ಮೋಹನ್ ಕುಮಾರ್ ಇವರು ಅನುಮೋದಿಸಿರುತ್ತಾರೆ. ಈ ಹಿನ್ನೆಲೆಯಲ್ಲಿ ಶ್ರೀ ಹೆಚ್. ಪಿ. ದೇಸಿಗೌಡ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು ಇವರನ್ನು ದಿನಾಂಕ 01–12–2010ರ ಪೂರ್ವಾಹ್ನದಿಂದ ಜಾರಿಗೆ ಬರುವಂತೆ ಜಸ್ಟೀಸ್ ಶ್ರೀ ವಿ. ಪಿ. ಮೋಹನ್ ಕುಮಾರ್‌ರವರ ಕಾರ್ಯದರ್ಶಿಯನ್ನಾಗಿ ತಾತ್ಕಾಲಿಕವಾಗಿ ನೇಮಿಸಿಕೊಳ್ಳಲಾಗಿದೆಯೆಂದು ಹಾಗೂ ಇವರ ವೇತನವನ್ನು ಕೆ.ಸಿ.ಎಸ್.ಆರ್. ನಿಯಮಗಳು 1958ರನ್ವಯ ನಿಗದಿಪಡಿಸುವಂತೆ ಕೋರಿರುತ್ತಾರೆ.

ಶ್ರೀ ಹೆಚ್. ಪಿ. ದೇಸಿಗೌಡ, ಜಸ್ಟೀಸ್ ಶ್ರೀ ವಿ. ಪಿ. ಮೋಹನ್ ಕುಮಾರ್‌ರವರ ಕಾರ್ಯದರ್ಶಿ ಇವರ ಮರು ನೇಮಕಾತಿ ವೇತನವನ್ನು ನಿಗದಿಪಡಿಸುವ ಬಗ್ಗೆ ಆರ್ಥಿಕ ಇಲಾಖೆಯೊಂದಿಗೆ ಸಮಾಲೋಚಿಸಿ, ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 125 ಪಿಪಿಸಿ 2009, ಬೆಂಗಳೂರು, ದಿನಾಂಕ: 29–01–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಹೆಚ್. ಪಿ. ದೇಸಿಗೌಡ, ಜಸ್ಟೀಸ್ ಶ್ರೀ ವಿ. ಪಿ. ಮೋಹನ್ ಕುಮಾರ್‌ರವರ ಕಾರ್ಯದರ್ಶಿ ಇವರ ಮರು ನೇಮಕಾತಿ ವೇತನವನ್ನು ರೂ. 23,783/–(ಇಪ್ಪತ್ತಮೂರು ಸಾವಿರದ ಏಳುನೂರಾ ಎಂಭತ್ತಮೂರು ರೂಪಾಯಿಗಳು ಮಾತ್ರ)

ಗಳಿಗೆ ನಿಗದಿಪಡಿಸಿದೆ. ಈ ವೇತನದೊಂದಿಗೆ ಮೂಲವೇತನವಾದ ರೂ. 51,550/– ಗಳಿಗೆ ಲಭ್ಯವಾಗುವ DA/HRA/CCA ಗಳನ್ನು ಪಡೆಯಬಹುದು. ಆದರೆ, ನಿವೃತ್ತ ವೇತನದ ಮೇಲಿನ ತುಟ್ಟಿಭತ್ಯೆಯನ್ನು ಪಡೆಯುವಂತಿಲ್ಲ. ನಿವೃತ್ತಿ ನಂತರದ ಸೇವೆಯನ್ನು ಅರ್ಹತಾದಾಯಕ ಸೇವೆಯೆಂದು ಪರಿಗಣಿಸುವಂತಿಲ್ಲ. ಶ್ರೀಯುತರ ನೇಮಕಾತಿಯು ಈ ಅದೇಶದೊಂದಿಗೆ ಲಗತ್ತಿಸಿರುವ ಅನುಬಂಧದ ಷರತ್ತು ಮತ್ತು ನಿಬಂಧನೆಗಳಿಗೆ ಒಳಪಟ್ಟಿರುತ್ತದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಹಿಂಬರಹ ಟಿಪ್ಪಣಿ ಸಂಖ್ಯೆ: ಆಇ 2110 ವೆಚ್ಚ–1/2010, ದಿನಾಂಕ 17–01–2011ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್. ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ

ಇಂಧನ ಇಲಾಖೆ

## ಸರ್ಕಾರಿ ಆದೇಶ ಸಂಖ್ಯೆ: ಇಎನ್ 125 ಪಿಪಿಸಿ 2009, ದಿನಾಂಕ: 29–01–2011ಕ್ಕೆ ಅನುಬಂಧ

ಗುತ್ತಿಗೆ ಆಧಾರದ ಮರು ನೇಮಕಾತಿಯ ಬಗ್ಗೆ ಷರತ್ತು ಮತ್ತು ನಿಬಂಧನೆಗಳು

1 ಶ್ರೀ ಹೆಚ್. ಪಿ. ದೇಸಿಗೌಡ ಇವರ ಗುತ್ತಿಗೆ ನೇಮಕಾತಿ ಅವಧಿಯು ದಿನಾಂಕ 01–12–2010 ರಿಂದ 30–06–2011ರ ಅವಧಿಯವರೆಗೆ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ, ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮಾತ್ರ ಇದ್ದು, ಇದೊಂದು ತಾತ್ಕಾಲಿಕ ನೇಮಕಾತಿ ಆಗಿರುತ್ತದೆ.

2 ಶ್ರೀ ಹೆಚ್. ಪಿ. ದೇಸಿಗೌಡ ಇವರು ಪಡೆಯುತ್ತಿರುವ ನಿವೃತ್ತಿ ವೇತನದೊಂದಿಗೆ ರೂ. 23,783/–ಮರು ನೇಮಕಾತಿ ವೇತನವನ್ನು ಪಡೆಯಲು ಅರ್ಹರಾಗಿರುತ್ತಾರೆ. ಈ ವೇತನದ ಜೊತೆಗೆ ಅವರು ನಿವೃತ್ತಿ ಹೊಂದುವಾಗ ಪಡೆಯುತ್ತಿದ್ದ ಮೂಲ ವೇತನ ಮೇಲೆ ಕಾಲಕಾಲಕ್ಕೆ ಲಭ್ಯವಾಗುವ ತುಟ್ಟಿಭತ್ಯೆ, ಮನೆ ಬಾಡಿಗೆ ಭತ್ಯೆ ನಗರ ಪರಿಹಾರ ಭತ್ಯೆಯನ್ನು ಪಡೆಯಲು ಅರ್ಹರಾಗಿರುತ್ತಾರೆ. ಆದರೆ ಅವರು ಪಡೆಯುತ್ತಿರುವ ನಿವೃತ್ತಿ ವೇತನದ ಮೇಲೆ ತುಟ್ಟಿಭತ್ಯೆ ಸೇರಿದಂತೆ ಯಾವುದೇ ಇತರ ಭತ್ಯೆಗಳು ಲಭ್ಯವಿರುವುದಿಲ್ಲ.

3 ಸದರಿ ಗುತ್ತಿಗೆ ನೌಕರರು ಸಾರ್ವಜನಿಕ ಹಿತದೃಷ್ಟಿಯಿಂದ ಪ್ರಯಾಣ ಮಾಡಲೇ ಬೇಕಾದಲ್ಲಿ ಮಾತ್ರ ಅವರು ನೇಮಕಾತಿ ಹೊಂದಿರುವ ಹುದ್ದೆಯ ಕಾಲಿತ ವೇತನ ಶ್ರೇಣಿಯ ಕನಿಷ್ಠ ವೇತನದ ಮೇಲೆ ನಿಯಮಾನುಸಾರ ಲಭ್ಯವಿರುವ ಪ್ರಯಾಣ ಭತ್ಯೆ ಮತ್ತು ದಿನಭತ್ಯೆಯನ್ನು ಪಡೆಯಲು ಅರ್ಹರಾಗಿರುತ್ತಾರೆ.

4 ಸದರಿ ಗುತ್ತಿಗೆ ನೌಕರರುಗಳು ವಾರ್ಷಿಕ 15 ದಿನಗಳ ಸಾಂದರ್ಭಿಕ ರಜೆ ಮತ್ತು ಕೆ.ಸಿ.ಎಸ್.ಆರ್. ನಿಯಮ 118 (ಎ)ರ ಪ್ರಕಾರ ಗಳಿಕೆ ರಜೆ ಪಡೆಯಲು ಅರ್ಹರಾಗಿರುತ್ತಾರೆ.

5 ಒಪ್ಪಂದದ ಷರತ್ತು ಮತ್ತು ನಿಬಂಧನೆಗಳಲ್ಲಿ ನೀಡಿರುವ ಸೌಲಭ್ಯಗಳ ಹೊರತಾಗಿ ಬೇರಾವುದೇ ಸೌಲಭ್ಯ ಅಂದರೆ ವೇತನ ಬಡ್ತಿ, ಪದೋನ್ನತಿ, ಪಿಂಚಣಿ ಇತ್ಯಾದಿ ಸೌಲಭ್ಯಗಳಿಗೆ ಸದರಿ ಗುತ್ತಿಗೆ ನೌಕರರು ಅರ್ಹರಾಗಿರುವುದಿಲ್ಲ.

6 ದುರ್ವರ್ತನೆ, ನಿರ್ಲಕ್ಷ್ಯೆಯ ನಿಮಿತ್ತ ಸರ್ಕಾರಕ್ಕೆ ಸಂಬಂಧಿಸಬಹುದಾದ ಎಲ್ಲಾ ನಷ್ಟಗಳನ್ನು ಸರ್ಕಾರಕ್ಕೆ ಸದರಿ ನೌಕರರು ಭರಿಸಿಕೊಡಲು ಬದ್ಧರಾಗಿರತಕ್ಕದ್ದು.

7 ಸದರಿ ಮರು ನೇಮಕಾತಿ ಅವಧಿಯ ಸೇವೆಯನ್ನು ನಿವೃತ್ತಿ ವೇತನ ಹಾಗೂ ಇತ್ಯಾದಿ ಸೌಲಭ್ಯಗಳಿಗೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸುವುದಿಲ್ಲ.

8 ಅವರ ಕರ್ತವ್ಯ, ಕಾರ್ಯ ಮತ್ತು ಪ್ರಕಾರ್ಯಗಳನ್ನು ಶ್ರದ್ಧೆ, ಭಕ್ತಿ ಮತ್ತು ಆಸಕ್ತಿಯಿಂದ ಅವರು ನೆರವೇರಿಸುವುದು

9 ಅವರು ಕರ್ತವ್ಯಗಳನ್ನು ಪಾಲಿಸುತ್ತಿರುವ ಅಥವಾ ನೆರವೇರಿಸುತ್ತಿರುವಾಗ ಅವರಿಗೆ ಲಭ್ಯವಾಗಬಹುದಾದ ಅಥವಾ ದೊರಕಬಹುದಾದ ಅಧಿಕೃತ ಮಾಹಿತಿಯನ್ನು ಗೌಪ್ಯವಾಗಿಟ್ಟು ಕಟ್ಟುನಿಟ್ಟಾಗಿ ಪಾಲಿಸಬೇಕು.

10 1966ರ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿ ಮತ್ತು 1957ರ ಕರ್ನಾಟಕ ನಾಗರೀಕಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗೆ ಅವರು ಬದ್ಧರಾಗಿರುತ್ತಾರೆ.

11 ಈ ಒಪ್ಪಂದದ ಷರತ್ತುಗಳನ್ನು ಉಲ್ಲಂಘಿಸಿದಲ್ಲಿ ಗುತ್ತಿಗೆ ನೇಮಕಾತಿಯು ತಾನಾಗಿಯೇ ಮುಕ್ತಾಯವಾಗುತ್ತದೆ

12 ಅವರ ದುರ್ನಡತೆಯಿಂದಾಗಲೀ ಅಥವಾ ನಿರ್ಲಕ್ಷ್ಯೆ, ಉದಾಸಿನತೆಯಿಂದಾಗಲೀ ಸರ್ಕಾರಕ್ಕೆ ಸಂಬಂಧಿಸಿದಂತೆ ಆರ್ಥಿಕ ನಷ್ಟವನ್ನು ಉಂಟುಮಾಡಿದ್ದಲ್ಲಿ, ಅದನ್ನು ಸರ್ಕಾರಕ್ಕೆ ತುಂಬಿಕೊಡಲು ಅವರು ಹೊಣೆಯಾಗಿರುತ್ತಾರೆ.

13 ಈ ಆದೇಶವನ್ನು ಸ್ವೀಕರಿಸಿದ ದಿನಾಂಕದಿಂದ ಏಳು ದಿನಗಳ ಒಳಗಾಗಿ ಐವತ್ತು (ರೂ. 50.00/–) ರೂಪಾಯಿಗಳ ಮೌಲ್ಯದ ಛಾಪಾ ಕಾಗದದಲ್ಲಿ ಸದರಿ ನೇಮಕಾತಿಯ ಷರತ್ತು ಮತ್ತು ನಿಬಂಧನೆಗಳನ್ನು ಒಳಗೊಂಡಿರುವ ಕರಾರು ಪತ್ರವನ್ನು ಕ್ರಮಬದ್ಧ ರೀತಿಯಲ್ಲಿ ಸದರಿ ನೌಕರರಿಂದ ಬರೆಯಿಸಿಕೊಳ್ಳತಕ್ಕದ್ದು.

**ಸುರೇಶ್. ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. ನಂ. 339

ಇಂಧನ ಇಲಾಖೆ

## FOREST, ECOLOGY AND ENVIRONMENT SECRETARIAT

**Sub :-** Diversion of 0.50 ha. of Forest Land in Sy. No. 78/1 of Marpady Block in Moodbidri Range, Kundapura Division, Dakshnina Kannada District for building materials in favour of Sri Aithappa Alva, m/s Padma Crashers, Bantwala.

**Read :-**
1) Letter No. A5 (6) GFL.CR.79/07-08, dated 13-08-2008 of the Principal Chief Conservator of Forests, Bangalore.
2) State Government letter No. FEE 93 FFM 2008, dated 10-11-2008
3) Government of India Ministry of Environment and Forests, Regional Office, South Zone, Bangalore letter No. 4-KRB551/2008-BAN/5220, dated 23rd July 2009.
4) Letter No. A5 (6) GFL.CR.79/07-08, dated 27-05-2010 of the Principal Chief Conservator of Forests, Bangalore.
5) State Government letter No. FEE 93 FFM 2008, dated 17-08-2010.
6) Government of India Ministry of Environment and Forests, Regional Office, South Zone, Bangalore letter No. 4-KRB551/2008-BAN/8122 dated: 2nd November, 2010.

**Preamble:-**

The Principal Chief Conservator of Forests had sent proposal vide his letter dated 13-08-2008 read at (1) above for diversion of 0.50 ha. of Forest land in Sy. No. 78/1 of Marpady Block in Moodbidri Range, Kundapura Division, Dakshnina Kannada District for building materials in favour of Sri Aithappa Alva, M/s Padma Crushers, Bantwala subject to certain conditions.

The proposal of the Principal Chief Conservator of Forests was recommended to Government of India, Ministry of Environment and Forests, Regional Office, South Zone, Bangalore vide State Government letter dated 10-11-2008 read at (2) above seeking prior approval of Government of India under section (2) of the Forest (Conservation) Act, 1980.

After careful consideration of the proposal of the State Government, Government of India vide its letter dated 23rd July 2009 read at (3) above has agreed in-principle (Stage-I) approval subject to the fulfillment of certain conditions.

In compliance of the conditions stipulated by Government of India vide its letter dated 23rd July 2009 the Principal Chief Conservator of Forests vide his letter dated 27-05-2010 read at (4) above has sent his compliance report. This compliance report was forwarded to Government of India vide State Government letter dated 17-08-2010 read at (5) above. Government of India vide its letter dated 2nd November 2010 read at (6) above has conveyed its final approval (Stage-II) under Section 2 of the Forest (Conservation) Act, 1980 for diversion of 0.50 ha. of forest land subject to certain conditions. Hence the order.

**Government Order No.: FEE 93 FFM 2008, Bangalore, Dated 24-01-2011**

In the circumstances explained above, Government is pleased to accord sanction under Section 2 of the Forest (Conservation) Act, 1980 for diversion of 0.50 ha. of Forest land in Sy. No. 78/1 of Marpady Block in Moodbidri Range, Kundapura Division, Dakshnina Kannada District for building materials in favour of Sri Aithappa Alva, M/s Padma Crushers, Bantwala subject to the following conditions.

1. Legal status of Forest land shall remain unchanged
2. The demarcation of the proposed forest area shall be carried out by erecting cement concrete pillars duly numbered at an interval of 20 meters at the cost of user agency.
3. The Compensatory afforestation shall be raised over 1.00 ha. of degraded forest land at the cost of user agency.
4. The user agency shall maintain area upto 7.5 meters as safety zone area all along the boundary outside the lease area as per the guidelines issued under forest (Conservation) Act, 1980. The State Government shall also raise and maintain the plantation over an area, one and half times of the extent of the safety zone, of the degraded forest land, at the project cost.
5. Adequate care shall be taken to check any rolling of over burdens/dumps beyond diverted area and also to check soil erosion caused due to quarrying activities.
6. The forest area shall be used for the purpose of quarrying, storage of materials and OB dumps only. No permanent buildings of labour sheds should be constructed in the leased area.
7. Reclamation plan shall be implemented by the user agency from the very first year of mining and an annual report shall be sent to the Nodal Officer, Karnataka and the Regional Office, Bangalore.
8. The consent of Karnataka State Pollution Control Board (KSPCB) shall be obtained under Air and Water Act before commencement of mining operation and it shall be renewed annually.
9. The additional amount of the Net Present Value (NPV) of the diverted forest land if any becoming due after revision of the same by the Hon'ble Supreme Court of India in future, shall be charged by the State Government from the user agency and the same shall be transferred to Ad-hoc CAMPA in account number CA 1582 of Corporation Bank, Block-II, CGO Complex, Phase-I, Lodhi Road, New Delhi-110003.
10. The total forest area utilized for the Project shall not exceed 0.50 ha. In case the land is not taken over by the user agency or the same is not used for the stipulated purpose within a period of two years, then the area shall be taken back by the Forest Department.
11. The lease period is for ten (10) years from the date of Notification
12. The user agency shall pay compensatory afforestation charges double the 0.50 ha. of degraded forest land in lieu of the land diverted for quarry purpose.

13. The lessee shall pay usual lease rent as prescribed by the Government from time to time.
14. The lessee shall take-up planting work on the static dumps during the advance quarrying operation.
15. Before closing the quarry lease the lessee shall reclaim the quarry and rehabilitate the dumping area at his cost/or deposit the cost to Forest Department as calculated by the Deputy Conservator of Forests/State Government.
16. The lessee shall carry out soil and water conservation and other necessary measures as advised by the Forest Department.
17. The lessee shall undertake to protect rigidly the leased area and forest area surrounding the area up to 100 meters from the leased site and shall ensure that no smuggling/poaching activities taken place in this area.
18. The lessee shall not cut any trees without prior permission of the Forest Department and all produce of permitted felling shall be handed over to Forest Department under cover of receipt transportation of quarried material (stones, jelly etc.,) should be strictly as per transit rules in force.
19. The lessee shall abide by all the conditions prescribed by Govt. of India and Govt. of Karnataka.
20. The lessee shall execute an agreement with the Forest Department binding himself to abide by all usual conditions and terms as per orders of the Government as well as Principal Chief Conservator of Forests.
21. In case of violation of agreement conditions, the Deputy Conservator of Forests will have right to suspend the mining activities.
22. Quarried material shall be used only within the District
23. Quarrying shall be operated by using Aluminum Nitrate and other light explosive chemicals for loosening the mineral.
24. The trees to be felled in the area should not exceed 10 number
25. The boundary of the quarry shall be fixed by erecting the stone pillars of four feet height.
26. No new roads shall be made/opened inside the forest
27. Net present Value shall be paid as per the Government Order dated 17-1-2004 and time to time revision.
28. Quarrying shall be contained within gentle slope not exceeding 30 degrees.
29. The lessee shall pay the cost of raising compensatory afforestation charges at the rate of prevailing at the time of sanction (at present it is Rs. 94,000/-per ha.)
30. Any other condition that the State Government or the Chief Conservator of Forests (Central), Regional Office, Bangalore may impose from time to time in the interest of conservation, protection and development of forests.

By Order and in the name of the Governor of Karnataka
**H. M. Mallikarjuna Swamy**
Under Secretary to Government
Forests, Ecology and Environment Department

PR. No. 340

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ** : ಚಿಕ್ಕಬಳ್ಳಾಪುರ ಜಿಲ್ಲೆ, ಗೌರಿಬಿದನೂರು ತಾಲ್ಲೂಕು ನಗರಗೆರೆ ಹೋಬಳಿ ಎಂ. ಗೊಲ್ಲಹಳ್ಳಿ ಹೊಸಕೆರೆ ನಿರ್ಮಾಣಕ್ಕೆ ಸ್ವಾಧೀನಪಡಿಸಿಕೊಂಡ ಜಮೀನುಗಳಿಗೆ ತೇವಣಿ ಮಾಡಲು ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ** : 1) ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ದಿನಾಂಕ 09–07–2010ರ ಪತ್ರದ ಸಂಖ್ಯೆ: ಮುಸದ/ಲೆಶಾಖೆ/ಲೆಸ–1/3 ಭೂಸ್ವಾಧೀನ/10–11/1652.
2) ಕಂದಾಯ ಇಲಾಖೆಯ ಪತ್ರ ಸಂಖ್ಯೆ: ಕಂಇ 01 ಭೂಸ್ವಾಕೋ 2010, ದಿನಾಂಕ 09–12–2010.

**ಪ್ರಸ್ತಾವನೆ :**

ಚಿಕ್ಕಬಳ್ಳಾಪುರ ಜಿಲ್ಲೆ, ಗೌರಿಬಿದನೂರು ತಾಲ್ಲೂಕು ನಗರಗೆರೆ ಹೋಬಳಿ ಕಾಟನಕಲ್ಲು ಮತ್ತು ಮುದ್ದಲೋಡು ಗ್ರಾಮಗಳ ಜಮೀನುಗಳನ್ನು ಎಂ. ಗೊಲ್ಲಹಳ್ಳಿ ಹೊಸಕೆರೆ ನಿರ್ಮಾಣಕ್ಕೆ ಸ್ವಾಧೀನಪಡಿಸಿಕೊಂಡಿದ್ದು, ಒಪ್ಪಂದದ ಅವಾರ್ಡ್‌ನಂತೆ ತೇವಣಿ ಮಾಡಲು ರೂ. 119.27 ಲಕ್ಷಗಳನ್ನು ಬಿಡುಗಡೆ ಮಾಡುವಂತೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ಇವರು ಮೇಲೆ ಕ್ರಮಾಂಕ (1)ರಲ್ಲಿ ಓದಲಾದ ಪತ್ರದಲ್ಲಿ ಕೋರಿರುತ್ತಾರೆ.

ಚಿಕ್ಕಬಳ್ಳಾಪುರ ಜಿಲ್ಲೆ, ಗೌರಿಬಿದನೂರು ತಾಲ್ಲೂಕು ನಗರಗೆರೆ ಹೋಬಳಿ ಕಾಟನಕಲ್ಲು ಮತ್ತು ಮುದ್ದಲೋಡು ಗ್ರಾಮಗಳ ವಿವಿಧ ಸರ್ವೆ ನಂಬರ್‌ಗಳಲ್ಲಿ 44–24½ ಎಕರೆ ಜಮೀನನ್ನು ಎಂ. ಗೊಲ್ಲಹಳ್ಳಿ ಹೊಸಕೆರೆ ನಿರ್ಮಾಣಕ್ಕಾಗಿ ಭೂಸ್ವಾಧೀನಪಡಿಸಿಕೊಳ್ಳಲು ಭೂಸ್ವಾಧೀನ ಕಾಯ್ದೆ ಕಲಂ 4(1)ರ ಅಧಿಸೂಚನೆ ದಿನಾಂಕ 10–05–2007ರಂದು ಹೊರಡಿಸಿದೆ. ಈ ಪ್ರಕರಣದಲ್ಲಿ ಜಿಲ್ಲಾಧಿಕಾರಿ, ಚಿಕ್ಕಬಳ್ಳಾಪುರ ಇವರ ಕೋರಿಕೆಯಂತೆ ಸದರಿ ಗ್ರಾಮಗಳ ಖುಷ್ಕಿ ಜಮೀನಿಗೆ ರೂ. 3.00 ಲಕ್ಷ ಹಾಗೂ ಬಾಗಾಯ್ತು ಜಮೀನುಗಳಿಗೆ ರೂ. 3.50 ಲಕ್ಷಗಳನ್ನು ನಿಗಧಿಪಡಿಸಿ ಒಪ್ಪಂದದ ಅವಾರ್ಡ್ ರಚಿಸಲು ಕಂದಾಯ ಇಲಾಖೆಯ ಮೇಲೆ ಕ್ರಮಾಂಕ (2)ರಲ್ಲಿ ಓದಲಾದ ಪತ್ರದಲ್ಲಿ ಸೂಚಿಸಿದೆ. ಆದುದರಿಂದ ಸಹಾಯಕ ಆಯುಕ್ತರು ಮತ್ತು ಭೂಸ್ವಾಧೀನಾಧಿಕಾರಿ, ಚಿಕ್ಕಬಳ್ಳಾಪುರ ಉಪ ವಿಭಾಗ ಇವರು ದಿನಾಂಕ 25–11–2010 ರಂದು ಒಪ್ಪಂದದ ಅವಾರ್ಡ್ ರಚಿಸಿರುತ್ತಾರೆ.

ಮೇಲ್ಕಂಡ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 102 ಭೂಸ್ವಾಪ್ರ 2010, ಬೆಂಗಳೂರು, ದಿನಾಂಕ: 29–01–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಚಿಕ್ಕಬಳ್ಳಾಪುರ ಜಿಲ್ಲೆ, ಗೌರಿಬಿದನೂರು ತಾಲ್ಲೂಕು ನಗರಗೆರೆ ಹೋಬಳಿ ಕಾಟನಕಲ್ಲು ಮತ್ತು ಮುದ್ದಲೋಡು ಗ್ರಾಮಗಳ ಜಮೀನುಗಳನ್ನು ಎಂ. ಗೊಲ್ಲಹಳ್ಳಿ ಹೊಸಕೆರೆ ನಿರ್ಮಾಣಕ್ಕೆ ಸ್ವಾಧೀನಪಡಿಸಿಕೊಂಡಿದ್ದು, ಒಪ್ಪಂದದ ಅವಾರ್ಡ್‌ನಂತೆ ತೇವಣಿ ಮಾಡಲು ರೂ. 119.27 ಲಕ್ಷಗಳನ್ನು ಬಿಡುಗಡೆ ಮಾಡಲು ಅನುಮೋದನೆ ನೀಡಿದೆ.

ಈ ವೆಚ್ಚವನ್ನು 2010–11ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ"4702–0–1–101–02–139 ಹೊಸಕೆರೆಗಳ ನಿರ್ಮಾಣ ಪ್ರಧಾನ ಕಾಮಗಾರಿಗಳು" ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೆ ಒಳಪಟ್ಟಿರುವ ಜಮೀನನ್ನು ಸಣ್ಣ ನೀರಾವರಿ ಇಲಾಖೆಯ ವಶಕ್ಕೆ ಪಡೆದುಕೊಂಡು ಕಂದಾಯ ದಾಖಲೆಗಳಲ್ಲಿ ಇಂಡೀಕರಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 01 ಟಿಎಫ್‌ಪಿ 2010, ದಿನಾಂಕ 20–10–2010ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಗೋಪಾಲ್**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. ನಂ. 341 ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ವಸತಿ ಸಚಿವಾಲಯ

**ವಿಷಯ** : ನೆರೆಹಾವಳಿ ಸಂತ್ರಸ್ಥರಿಗೆ ಪುನರ್ವಸತಿ ಕಲ್ಪಿಸುವ ಬಗ್ಗೆ.

**ಓದಲಾಗಿದೆ** : 1) ಸರ್ಕಾರದ ತಿದ್ದುಪಡಿ ಆದೇಶ ಸಂಖ್ಯೆ: ವಇ 16 ಹೆಚ್‌ಎಹೆಚ್ 2010, ದಿನಾಂಕ 27–03–2010

2) ಮಾನ್ಯ ಮುಖ್ಯಮಂತ್ರಿಗಳ ಕಾರ್ಯದರ್ಶಿಯವರ ಟಿಪ್ಪಣಿ ಸಂಖ್ಯೆ: ಮುಮಕಾ/7447/2010. ದಿನಾಂಕ 31–12–2010.

**ಪ್ರಸ್ತಾವನೆ :**

ಕಳೆದ ವರ್ಷ ಉತ್ತರ ಕರ್ನಾಟಕ ಜಿಲ್ಲೆಗಳಲ್ಲಿ ಸುರಿದ ಭಾರಿ ಮಳೆ ಮತ್ತು ನೆರೆಹಾವಳಿಯಿಂದ ಮನೆಗಳನ್ನು ಕಳೆದುಕೊಂಡವರಿಗೆ "ಆಸರೆ" ಯೋಜನೆಯಡಿ ಮನೆಗಳನ್ನು ನಿರ್ಮಿಸಲಾಗುತ್ತಿದೆ. ಕರ್ನಾಟಕ ಗ್ರಾಮೀಣ ಮೂಲಭೂತ ಸೌಕರ್ಯ ಅಭಿವೃದ್ಧಿ ನಿ. ಸಂಸ್ಥೆಯ ಬಾಗಲಕೋಟೆ ಜಿಲ್ಲೆ ಹುನಗುಂದ ತಾಲ್ಲೂಕಿನ ಇಳಕಲ್ ಗ್ರಾಮದಲ್ಲಿ 500 ಮನೆಗಳನ್ನು ನಿರ್ಮಿಸಲು ಪ್ರಾರಂಭಿಸದೆ ಇರುವುದರಿಂದ ಸದರಿ ಕಾಮಗಾರಿಯನ್ನು ಕರ್ನಾಟಕ ಗೃಹ ಮಂಡಳಿಗೆ ಹಂಚಿಕೆ ಮಾಡಲು ಬಾಗಲಕೋಟೆ ಜಿಲ್ಲಾಧಿಕಾರಿಗಳು ಕೋರಿರುತ್ತಾರೆ. ಮನೆಗಳ ನಿರ್ಮಾಣ ಕೈಗೊಳ್ಳಲು ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಇ 16 ಹೆಚ್‌ಎಹೆಚ್ 2010, ಬೆಂಗಳೂರು, ದಿನಾಂಕ: 21–01–2011**

ನೆರೆಹಾವಳಿ ಸಂತ್ರಸ್ಥರಿಗೆ ಪುನರ್ವಸತಿ ಕಲ್ಪಿಸುವುದಕ್ಕಾಗಿ ಕರ್ನಾಟಕ ಗ್ರಾಮೀಣ ಮೂಲಭೂತ ಸೌಕರ್ಯ ಅಭಿವೃದ್ಧಿ ನಿ. ಸಂಸ್ಥೆಗೆ ವಹಿಸಲಾದ ಬಾಗಲಕೋಟೆ ಜಿಲ್ಲೆ ಹುನಗುಂದ ತಾಲ್ಲೂಕಿನ ಇಳಕಲ್ ಗ್ರಾಮದಲ್ಲಿ 500 ಮನೆಗಳ ನಿರ್ಮಾಣ ಕಾಮಗಾರಿಯನ್ನು ಕರ್ನಾಟಕ ಗೃಹ ಮಂಡಳಿಗೆ ವಹಿಸಿಕೊಡಲಾಗಿದೆ. ಈ ಮನೆಗಳ ನಿರ್ಮಾಣ ಕಾಮಗಾರಿಯನ್ನು ಕೂಡಲೇ ಕೈಗೊಂಡು ಶೀಘ್ರವಾಗಿ ಪೂರ್ಣಗೊಳಿಸಲು ಆದೇಶಿಸಲಾಗಿದೆ. ಈ ಕಾಮಗಾರಿಗಳಿಗೆ ಬೇಕಾದ ಹಣವನ್ನು ಬಿಡುಗಡೆ ಮಾಡಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಆರ್. ವಲ್ಲೂರ**

ಪಿ.ಆರ್. ನಂ. 342 ಪೀಠಾಧಿಕಾರಿ–2, ವಸತಿ ಇಲಾಖೆ

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

ತಿದ್ದುಪಡಿ

ಸಂಖ್ಯೆ: ಸಿಆಸುಇ/36/ಕೆಇವಿ/2008, ಬೆಂಗಳೂರು, ದಿನಾಂಕ 24–01–2011

***

ಶ್ರೀ ಕೆ. ಪಿ. ಹೊನಕೇರಿ, ಕೆ.ಎ.ಎಸ್. ಇವರ ದಾಳಿ ಪ್ರಕರಣದ ವಿರುದ್ಧ ಹೊರಡಿಸಿದ ಅಭಿಯೋಜನಾ ಸರ್ಕಾರಿ ಆದೇಶ ಸಂ:ಸಿಆಸುಇ 36 ಕೆಇವಿ 2008 ದಿನಾಂಕ 20–12–2010ರ ಆದೇಶದಲ್ಲಿನ ಎರಡನೇ ಪುಟದ ಮೊದಲ ಕಂಡಿಕೆಯ ಕ್ರಮ ಸಂ. 5 ರಲ್ಲಿ ದಿನಾಂಕ 28–03–2008 ಎಂಬುದರ ಬದಲಿಗೆ ದಿನಾಂಕ 28–04–2008 ಎಂದು ತಿದ್ದಿಕೊಂಡು ಓದಿಕೊಳ್ಳತಕ್ಕದ್ದು.

ಹಾಗೂ ಸದರಿ ಆದೇಶದ ಎರಡನೇ ಪುಟದ ಕೊನೆಯಲ್ಲಿ ಕ್ರಮ ಸಂ. 4ರಲ್ಲಿ ದಿನಾಂಕ 28–03–2008 ರಂದು ಎಂದು ಸೇರಿಸಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಾ॥ ಎಂ. ಟಿ. ರೇಜು**

ಸರ್ಕಾರದ ಉಪ ಕಾರ್ಯದರ್ಶಿ

ಪಿ.ಆರ್. ನಂ. 343 ಸಿಆಸುಇ (ಸೇವೆಗಳು)

## ಇಂಧನ ಸಚಿವಾಲಯ

**ವಿಷಯ** : ಮೆII ಫೀಜ಼ಾ ಡೆವಲಪರ್ಸ್ ಅಂಡ್ ಇಂಟರ್ ಟ್ರೇಡ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಹಂಚಿಕೆ ಮಾಡಲಾಗಿರುವ 15.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ರದ್ದು ಪಡಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಡಿಇ 319 ಎನ್‌ಸಿಇ 2004 ದಿನಾಂಕ: 21.12.2004.

**2)** ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/08/cancellation/ 2010/1001 ದಿನಾಂಕ: 15.04.2010 ಮತ್ತು 19/20.04.2010.

**3)** ಕಾರಣ ಕೇಳುವ ನೋಟೀಸ್ ಸಂಖ್ಯೆ: ಇಎನ್ 208 ಎನ್‌ಸಿಇ 2010 ದಿನಾಂಕ: 26.04 2010.

4) ಮೆ|| ಫೀಜ಼ಾ ಡೆವಲಪರ್ಸ್ ಅಂಡ್ ಇಂಟರ್ ಟ್ರೇಡ್ ಪ್ರೈವೇಟ್ಸ್ ಲಿಮಿಟೆಡ್‌ನ ಪತ್ರ ಸಂಖ್ಯೆ ಫೀಜ಼ಾ / ಎಸಿಎಸ್-ಇಡಿ/05-10/127 ದಿನಾಂಕ: 12.05.2010.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಮೆII ಫೀಜ಼ಾ ಡೆವಲಪರ್ಸ್ ಅಂಡ್ ಇಂಟರ್‌ಟ್ರೇಡ್ ಲಿಮಿಟೆಡ್ ಇವರಿಗೆ ಚಿಕ್ಕಮಗಳೂರು ಜಿಲ್ಲೆಯ ಯರಡಹಂಕಲ್ಲು ಗ್ರಾಮದಲ್ಲಿ 6.00 ಮೆಗಾ ವ್ಯಾಟ್ ಮತ್ತು ಹೊಗೆರಹಳ್ಳಿ ಗ್ರಾಮದಲ್ಲಿ 9.00 ಮೆಗಾ ವ್ಯಾಟ್ (ಒಟ್ಟು 15.00 ಮೆಗಾ ವ್ಯಾಟ್ ) ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರಗಳಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ, ಬೆಂಗಳೂರು ಇವರು ದಿನಾಂಕ: 31.03.2010ರವರೆಗೆ ಈಗಾಗಲೇ ಹಂಚಿಕೆಯಾಗಿದ್ದು ಯೋಜನೆಯನ್ನು ಪ್ರಾರಂಭಿಸದೇ ಇರುವ ಕಂಪನಿಗಳ ಪಟ್ಟಿ ಮಾಡಿ ಕಳುಹಿಸಿರುತ್ತಾರೆ.

ಮೆ. ಫೀಜ಼ಾ ಡೆವಲಪರ್ಸ್ ಅಂಡ್ ಇಂಟರ್ ಟ್ರೇಡ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಯೋಜನೆ ಹಂಚಿಕೆಯಾಗಿ ನಿಗದಿತ ಅವಧಿಯೊಳಗೆ ಯೋಜನೆಯ ಅನುಷ್ಠಾನದ ನಿಟ್ಟಿನಲ್ಲಿ ಯಾವುದೇ ಕ್ರಮ ಕೈಗೊಳ್ಳದೇ ಇರುವುದರಿಂದ ಹಾಗೂ ಯೋಜನೆಯ ಕಾಲಾವಕಾಶ ವಿಸ್ತರಿಸಿಕೊಳ್ಳದೇ ಇರುವುದರಿಂದ ಮೇಲೆ ಓದಲಾದ ಕ್ರಮ ಸಂಖ್ಯೆ (3) ರ ಕಾರಣ ಕೇಳುವ ನೋಟೀಸಿನಲ್ಲಿ ಯೋಜನೆಯ ಹಂಚಿಕೆಯನ್ನು ಏಕೆ ರದ್ದು ಪಡಿಸಬಾರದೆಂಬುದಕ್ಕೆ ಸಮಜಾಯಿಷಿಯನ್ನು ನೀಡುವಂತೆ ನೋಂದಾಯಿತ ಅಂಚೆ ಮೂಲಕ ತಿಳಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (4) ರ ಪತ್ರದಲ್ಲಿ ಅಭಿವೃದ್ಧಿದಾರರು ಕಾರಣ ಕೇಳುವ ನೋಟೀಸಿಗೆ ಉತ್ತರಿಸುತ್ತ, ಭೂ ಸರ್ವೆ ಹಾಗೂ ಇತರೆ ಅನುಮೋದನೆಗಾಗಿ ಹೆಚ್ಚಿನ ಪ್ರಮಾಣದಲ್ಲಿ ವೆಚ್ಚ ಮಾಡಲಾಗಿದೆ ಹಾಗೂ ಕಾಲಾವಧಿ ವಿಸ್ತರಣೆ ಕುರಿತು ಕೆ.ಇ.ಆರ್.ಇ.ಡಿ.ಎಲ್. ಗೆ ಮನವಿ ಸಲ್ಲಿಸಲಾಗಿದೆ ಎಂದು ತಿಳಿಸಿ, ಕಾರಣ ಕೇಳುವ ನೋಟೀಸನ್ನು ಹಿಂದಕ್ಕೆ ಪಡೆಯಬೇಕೆಂದು ಕೋರಿರುತ್ತಾರೆ. ಅಭಿವೃದ್ಧಿದಾರರು ಸಾಧಿಸಿರುವ ಪ್ರಗತಿಯ ಬಗ್ಗೆ ಯಾವುದೇ ಪೂರಕ ದಾಖಲಾತಿಗಳನ್ನು ಸಲ್ಲಿಸಿರುವುದಿಲ್ಲ. ಯೋಜನೆ ಹಂಚಿಕೆಯಾಗಿ ಸುಮಾರು 5 1/2 ವರ್ಷಗಳು ಕಳೆದಿದ್ದರೂ ಸಹ ಯೋಜನೆಯನ್ನು ಅನುಷ್ಠಾನಗೊಳಿಸುವ ನಿಟ್ಟಿನಲ್ಲಿ ಯಾವುದೇ ಕ್ರಮವನ್ನು ಅಭಿವೃದ್ಧಿದಾರರು ಕೈಗೊಂಡಿರುವುದಿಲ್ಲ.

ಸದರಿ ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಈ ಕೆಳಕಂಡಂತೆ ಆದೇಶಿಸಲಾಗಿದೆ:-

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 208 ಎನ್‌ಸಿಇ 2010, ಬೆಂಗಳೂರು, ದಿನಾಂಕ: 02-02-2011**

ಪ್ರಸ್ತಾವನೆಯನ್ನು ವಿವರಿಸಿರುವ ಕಾರಣಗಳಿಂದಾಗಿ ಸರ್ಕಾರಿ ಆದೇಶ ಸಂಖ್ಯೆ: ಡಿಇ 319 ಎನ್‌ಸಿಇ 2004 ದಿನಾಂಕ: 21.12.2004ರಲ್ಲಿ ಮೆII ಫೀಜ಼ಾ ಡೆವಲಪರ್ಸ್ ಅಂಡ್ ಇಂಟರ್ ಟ್ರೇಡ್ ಪ್ರೈವೇಟ್ ಲಿಮಿಟೆಡ್ ಇವರ ಚಿಕ್ಕಮಗಳೂರು ಜಿಲ್ಲೆಯ ಯರಡಹಂಕಲ್ಲು (6.00 ಮೆಗಾ ವ್ಯಾಟ್) ಮತ್ತು ಹೊಗರೆಹಳ್ಳಿ ಗ್ರಾಮದಲ್ಲಿ (9.00 ಮೆಗಾ ವ್ಯಾಟ್) ಹಂಚಿಕೆಯಾಗಿರುವ 15.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಹಂಚಿಕೆ ಆದೇಶ ಮತ್ತು ಈ ಸಂಬಂಧ ಮಾಡಿಕೊಂಡಿರುವ ಒಡಂಬಡಿಕೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದು ಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಸುರೇಶ್. ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ

**ಪಿ.ಆರ್ 325**

## ಇಂಧನ ಸಚಿವಾಲಯ

**ವಿಷಯ :** ಮೆ. ವಕ್ಕಲ್ ಪವರ್ ಕಾರ್ಪೊರೇಷನ್ ಲಿಮಿಟೆಡ್ ಇವರಿಗೆ 12.00 ಮೆಗಾ ವ್ಯಾಟ್ ಸಾಮರ್ಥ್ಯದ ಜೈವಿಕ ಇಂಧನ ಆಧಾರಿತ ವಿದ್ಯುತ್ ಸ್ಥಾವರ ಸಾಪನೆಗೆ ನಿರಾಕ್ಷೇಪಣೆ ನೀಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಪತ್ರ ಸಂಖ್ಯೆ: ಡಿಇ 24 ಎನ್‌ಸಿಇ 2002 ದಿನಾಂಕ: 03.04.2002.

2) ಸರ್ಕಾರದ ಪತ್ರ ಸಂಖ್ಯೆ: **ಡಿ ಇ** 270 ಎನ್‌ಸಿಇ 2002 ದಿನಾಂಕ: 07.11.2002.

3) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/03/ವಿಪಿಸಿಎಲ್/10/3522 ದಿನಾಂಕ: 02/20.12.2010.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಪತ್ರದಲ್ಲಿ ಮೆII ವಕ್ಕಲ್ ಪವರ್ ಕಾರ್ಪೊರೇಷನ್ ಲಿಮಿಟೆಡ್ ಇವರಿಗೆ ಕೋಲಾರ ಜಿಲ್ಲೆಯ ಮುಳಬಾಗಿಲಿನಲ್ಲಿ 7.5 ಮೆಗಾ ವ್ಯಾಟ್ ಸಾಮರ್ಥ್ಯದ ಜೈವಿಕ ಇಂಧನ ಆಧಾರಿತ ವಿದ್ಯುತ್ ಸ್ಥಾವರವನ್ನು ಸ್ಥಾಪಿಸಲು ನಿರಾಕ್ಷೇಪಣೆ ಯನ್ನು ನೀಡಲಾಗಿತ್ತು.

ಮೇಲೆ ಓದಲಾದ (2)ರ ಪತ್ರದಲ್ಲಿ ಮೆII ವಕ್ಕಲ್ ಪವರ್ ಕಾರ್ಪೊರೇಷನ್ ಲಿಮಿಟೆಡ್ ಇವರಿಗೆ ಕೋಲಾರ ಜಿಲ್ಲೆಯ ಮುಳಬಾಗಿಲಿನಲ್ಲಿ ನಿರಾಕ್ಷೇಪಣೆ ನಿಡಲಾಗಿದ್ದ 7.5 ಮೆಗಾ ವ್ಯಾಟ್ ಸಾಮರ್ಥ್ಯದ ಜೈವಿಕ ಇಂಧನ ಆಧಾರಿತ ವಿದ್ಯುತ್ ಸ್ಥಾವರದ ಸಾಮರ್ಥ್ಯವನ್ನು 12.00 ಮೆಗಾ ವ್ಯಾಟ್ ಹೆಚ್ಚಿಸಲಾಗಿತ್ತು.

ಮೇಲೆ ಓದಲಾದ (3) ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆII ವಕ್ಕಲ್ ಪವರ್ ಕಾರ್ಪೊರೇಷನ್ ಲಿಮಿಟೆಡ್ ಇವರ ಕೋರಿಕೆಯ ಮೇರೆಗೆ ಸದರಿಯವರಿಗೆ ಈಗಾಗಲೇ ಕೋಲಾರ ಜಿಲ್ಲೆಯ ಮುಳಬಾಗಿಲು ತಾಲ್ಲೂಕಿನಲ್ಲಿ 12.00 ಮೆಗಾ ವ್ಯಾಟ್ ಸಾಮರ್ಥ್ಯದ ಜೈವಿಕ ಇಂಧನ ಆಧಾರಿತ ವಿದ್ಯುತ್ ಸ್ಥಾವರದ ಸ್ಥಾಪನೆಗೆ ನೀಡಲಾಗಿರುವ ನಿರಾಕ್ಷೇಪಣೆಯ ಅವಧಿಯನ್ನು ವಿಸ್ತರಿಸಲು ಸರ್ಕಾರಕ್ಕೆ ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಅಭಿವೃದ್ಧಿದಾರರು 2002ರಿಂದ ಇದುವರೆಗೂ ಜೈವಿಕ ಇಂಧನ ಆಧಾರಿತ ವಿದ್ಯುತ್ ಸ್ಥಾವರ ಸ್ಥಾಪಿಸಿರುವುದಿಲ್ಲ. ಆದ್ದರಿಂದ ಈಗಾಗಲೇ ನೀಡಿರುವ ನಿರಾಕ್ಷೇಪಣೆಯನ್ನು ರದ್ದುಗೊಳಿಸಿ ಹೊಸದಾಗಿ ನಿರಾಕ್ಷೇಪಣೆಯನ್ನು ನೀಡುವ ಬಗ್ಗೆ ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 500 ಎನ್‌ಸಿಇ 2010, ಬೆಂಗಳೂರು, ದಿನಾಂಕ: 02–02–2011**

ಮೆ|| ವಕ್ಕಲ್ ಪವರ್ ಕಾರ್ಪೊರೇಷನ್ ಲಿಮಿಟೆಡ್ ಇವರಿಗೆ ಸರ್ಕಾರದ ಪತ್ರಗಳ ಸಂಖ್ಯೆ: ಡಿಇ 24 ಎನ್‌ಸಿಇ 2002 ದಿನಾಂಕ: 03.04.2002 ಮತ್ತು ಸಂಖ್ಯೆ: ಡಿಇ 270 ಎನ್‌ಸಿಇ 2002 ದಿನಾಂಕ: 07.11.2002ರಲ್ಲಿ ಕೋಲಾರ ಜಿಲ್ಲೆಯ ಮುಳಬಾಗಿಲು ತಾಲ್ಲೂಕಿನಲ್ಲಿ 12 ಮೆಗಾ ವ್ಯಾಟ್ ಸಾಮರ್ಥ್ಯದ ಜೈವಿಕ ಇಂಧನ ವಿದ್ಯುತ್ ಸ್ಥಾವರ ಸ್ಥಾಪಿಸಲು ನೀಡಲಾಗಿದ್ದ ನಿರಾಕ್ಷೇಪಣೆಯನ್ನು ರದ್ದುಪಡಿಸಲಾಗಿದೆ.

ಮುಂದುವರೆದು, ಮೆII ವಕ್ಕಲ್ ಪವರ್ ಕಾರ್ಪೊರೇಷನ್ ಲಿಮಿಟೆಡ್ ಇವರಿಗೆ ಕೋಲಾರ ಜಿಲ್ಲೆಯ ಮುಳಬಾಗಿಲು ತಾಲ್ಲೂಕಿನ ವಿ. ಗಟ್ಟಹಳ್ಳಿ ಎಂಬಲ್ಲಿ ನೀಡಲಾಗಿರುವ 12.00 ಮೆಗಾ ವ್ಯಾಟ್ ಸಾಮರ್ಥ್ಯದ ಜೈವಿಕ ಇಂಧನ ಆಧಾರಿತ ವಿದ್ಯುತ್ ಸ್ಥಾವರವನ್ನು ದಿನಾಂಕ: 31.12.2011ರೊಳಗಾಗಿ ಸ್ಥಾಪಿಸಬೇಕೆಂಬ ನಿಬಂಧನೆಗೊಳಪಟ್ಟು ಈ ಕೆಳಗಿನ ಷರತ್ತಿಗೊಳಪಟ್ಟು ನಿರಾಕ್ಷೇಪಣೆಯನ್ನು ನೀಡಿದೆ:–

a. The company shall obtain separate clearance from Karnataka Power Transmission Corporation Limited inrespect of evacuation of power.

b. The company shall enter into wheeling and Banking agreement with Bagalore Electricity Supply Company Limited (BESCOM) in case of selling power to third party and power purchase agreement in case of selling power to BESCOM.

c. The company shalll obtain necessary statutory clearence wherever required from the respective Departments / Organizations such as Forest Department, Revenue Department, & Karnataka State Pollution Control Board, etc. for the Power plant.

d. The Detailed Project Report (D.P.R.) for the power plant shall be got approved by Karnataka Renewable Energy Development Limited, before the commencement of the power plant.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಸುರೇಶ್. ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ

ಪಿ.ಆರ್ 326

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ** : ಗುಲಬರ್ಗಾ ಜಿಲ್ಲೆಯ ಸೇಡಂ ತಾಲ್ಲೂಕಿನ ವೆಂಕಟಾಪುರ ತಾಂಡಾ ಹತ್ತಿರ ಅಣೆಕಟ್ಟು ನಿರ್ಮಾಣ ಕಾಮಗಾರಿಯ ಟೆಂಡರ್ ಅನುಮೋದನೆ ಕುರಿತು.

**ಓದಲಾಗಿದೆ:** 1) ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಸಂಖ್ಯೆ: ಮುಇಂ / ಸನೀ(ಉ) ವಲಯ/ಬಿಜೆಪಿ/ಎಇ–14/2010–11/6371 ದಿನಾಂಕ 02.12.2010

2) ಸರ್ಕಾರದ ಆದೇಶ ಸಂಖ್ಯೆ: ಸನೀಇ 236 ಮಸಾವಿ 2009 (10), ದಿ: 24/12/2009.

3) ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ರವರ ದಿನಾಂಕ 22/01/2011ರ ಪತ್ರ ಸಂಖ್ಯೆ: ಮುಸದ/ಆಪ್ತಶಾಖೆ/ಟೆಂಡರ್/08–09/249

**ಪ್ರಸ್ತಾವನೆ:**

ಗುಲಬರ್ಗಾ ಜಿಲ್ಲೆಯ ಸೇಡಂ ತಾಲ್ಲೂಕಿನ ವೆಂಕಟಾಪುರ ತಾಂಡಾ ಹತ್ತಿರ ಅಣೆಕಟ್ಟು ನಿರ್ಮಾಣ ಕಾಮಗಾರಿಯ 250.00 ಲಕ್ಷ ರೂಗಳ ಅಂದಾಜಿಗೆ ಮೇಲೆ (2)ರಲ್ಲಿ ಓದಲಾದ ದಿನಾಂಕ 24/12/09ರ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ. ಈ ಕಾಮಗಾರಿಗೆ ಎ.ಐ.ಬಿ.ಪಿ ಕಾರ್ಯಕ್ರಮದಡಿ ಭಾರತ ಸರ್ಕಾರದ ಅನುಮೋದನೆ ದೊರಕಿರುತ್ತದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಗುಲ್ಬರ್ಗ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ– ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ರಾಜ್ಯ ಟೆಂಡರ್ ಬುಲೆಟಿನ್ | 18.10.2010 |
| ಜಿಲ್ಲಾ ಟೆಂಡರ್ ಬುಲೆಟಿನ್ | 15.10.2010 |
| ಸಂಯುಕ್ತ ಕರ್ನಾಟಕ ದಿನಪತ್ರಿಕೆ | 16.10.2010 |
| ಕರ್ನಾಟಕ ರಾಜ್ಯ ಪತ್ರ | 21.10.2010 |

ಇ– ಪ್ರಕ್ಯೂರ್‌ಮೆಂಟ್ ಮೂಲಕ ಟೆಂಡರ್‌ನ ತಾಂತ್ರಿಕ ಬಿಡ್ ಅನ್ನು ತೆರೆದು ಪರಿಶೀಲಿಸಲಾಗಿದ್ದು, ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ 4 ಜನ ಗುತ್ತಿಗೆದಾರರು ಟೆಂಡರ್‌ನಲ್ಲಿ ಭಾಗವಹಿಸಿದ್ದು ಈ ಪೈಕಿ ಎಲ್ಲಾ ಗುತ್ತಿಗೆದಾರರು ಅರ್ಹತೆ ಹೊಂದಿರುತ್ತಾರೆ. ಅವರ ಆರ್ಥಿಕ ಬಿಡ್ ಅನ್ನು ತೆರೆಯಲಾಗಿದ್ದು ವಿವರಗಳು ಕೆಳಕಂಡಂತಿವೆ.

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | ರೂ. 2,42,79,992/– |
| ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | ರೂ. 3,27,91,524/– |

| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ /ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
|---|---|---|---|---|
| 1 | ಮೆII ಅಮೃತಾ ಕನ್‌ಸ್ಟ್ರಕ್ಷನ್ಸ್ (ಪಿ. ವೆಂಕಟೇಶ್ವರ ರಾವ್) ಪ್ರಥಮ ದರ್ಜೆ ಗುತ್ತಿಗೆದಾರರು | 3,02,99,134/- | 24.79 ಹೆಚ್ಚು | 7.60 ಕಡಿಮೆ |
| 2 | ದೇವೀಂದ್ರಪ್ಪ ಗೌಡ ಪ್ರಥಮ ದರ್ಜೆ ಗುತ್ತಿಗೆದಾರರು | 3,56,34,549/- | 46.76 ಹೆಚ್ಚು | 8.67 ಹೆಚ್ಚು |
| 3 | ಹುಲಿಕಂಠರಾಯ ಸಾಹೇಬಗೌಡ ಪ್ರಥಮ ದರ್ಜೆ ಗುತ್ತಿಗೆದಾರರು | 3,56,90,132/- | 46.99 ಹೆಚ್ಚು | 8.84 ಹೆಚ್ಚು |
| 4 | ರವಿಶಂಕರ ಆರ್. ಪ್ರಥಮ ದರ್ಜೆ ಗುತ್ತಿಗೆದಾರರು | 3,61,97,870/- | 49.09 ಹೆಚ್ಚು | 10.39 ಹೆಚ್ಚು |

ಮೇಲ್ಕಂಡಂತೆ ಕ್ರ.ಸಂ.1ರಲ್ಲಿರುವ ಮೆ. ಅಮೃತಾ ಕನ್‌ಸ್ಟ್ರಕ್ಷನ್ಸ್, 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 7.60 ರಷ್ಟು ಕಡಿಮೆ ಇದ್ದು, ಸದರಿಯವರ ಟೆಂಡರ್‌ನ್ನು ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ (1) ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ದಿನಾಂಕ 06/01/2011ರಂದು ನಡೆದ ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಗೆ ಈ ಟೆಂಡರ್‌ನ್ನು ಮಂಡಿಸಲಾಯಿತು. ಸಭೆಯಲ್ಲಿ ಇವರ ಟೆಂಡರನ್ನು ಪರಿಶೀಲಿಸಿದ ನಂತರ 2010-11ನೇ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 3,27,91,524/- ಗಳ ಮೇಲೆ ಶೇಕಡ 7.60 ರಷ್ಟು ಕಡಿಮೆ ಇರುವ ದರಗಳಿಗೆ ಅಂದರೆ ರೂ. 3,02,99,134/- ಗಳಿಗೆ ಕಾಮಗಾರಿಯನ್ನು ಮೆII ಅಮೃತಾ ಕನ್‌ಸ್ಟ್ರಕ್ಷನ್ಸ್, ಒಂದನೆ ದರ್ಜೆ ಗುತ್ತಿಗೆದಾರರಿಗೆ ವಹಿಸುವಂತೆ ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 3ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 53 ಅಪಿಬಂ 2010, ಬೆಂಗಳೂರು, ದಿನಾಂಕ 03 ನೇ ಫೆಬ್ರವರಿ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಗುಲಬರ್ಗಾ ಜಿಲ್ಲೆಯ ಸೇಡಂ ತಾಲ್ಲೂಕಿನ ವೆಂಕಟಾಪುರ ತಾಂಡಾ ಹತ್ತಿರ ಅಣೆಕಟ್ಟು ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 3,27,91,524/- ಗಳ ಮೇಲೆ ಶೇಕಡ7.60 ರಷ್ಟು ಕಡಿಮೆ ಇರುವ ದರಗಳಿಗೆ ಅಂದರೆ ರೂ. 3,02,99,134/- ಗಳಿಗೆ (ಮೂರು ಕೋಟಿ ಎರಡು ಲಕ್ಷ ತೊಂಬತ್ತೊಂಬತ್ತು ಸಾವಿರದ ಒಂದು ನೂರ ಮುವ್ವತ್ತನಾಲ್ಕು ರೂ.ಗಳು ಮಾತ್ರ) ಮೆII ಅಮೃತಾ ಕನ್‌ಸ್ಟ್ರಕ್ಷನ್ಸ್, ಒಂದನೇ ದರ್ಜೆ ಗುತ್ತಿಗೆದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್ ಡಿ 1 ಟಿಎಫ್ ಪಿ 2002, ದಿನಾಂಕ: 20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ರುದ್ರಮೂರ್ತಿ**

ಪಿ.ಆರ್ 327

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ

ಜಲ ಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ** : ಬೆಳಗಾವಿ ಜಿಲ್ಲೆ, ಅಥಣಿ ತಾಲ್ಲೂಕಿನ ಕಿರಣಗಿ ಸೈಟ್-2 ಗ್ರಾಮದ ಹತ್ತಿರ ಹಿರೇಹಳ್ಳಕ್ಕೆ ಅಡ್ಡಲಾಗಿ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಟೆಂಡರ್ ಅನುಮೋದನೆ ಕುರಿತು.

**ಓದಲಾಗಿದೆ:** 1) ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಸಂಖ್ಯೆ: ಮುಇಂ/ಸನೀ/(ಉ) ವ /ಬಿಜೆಪಿ/ಎಇ-1/2010-11/6361 ದಿನಾಂಕ 02.12.2010

**2)** ಸರ್ಕಾರದ ಆದೇಶ ಸಂಖ್ಯೆ: **ಸನೀಇ 236 ಮಸಾವಿ 2009 (6), ದಿ: 24/12/2009.**

**3)** ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ರವರ ದಿನಾಂಕ 22/01/2011ರ ಪತ್ರ ಸಂಖ್ಯೆ: ಮುಸದ/ಆಪ್ತಶಾಖೆ/ಟೆಂಡರ್/08-09/249

**ಪ್ರಸ್ತಾವನೆ:**

ಬೆಳಗಾವಿ ಜಿಲ್ಲೆ, ಅಥಣಿ ತಾಲ್ಲೂಕಿನ ಕಿರಣಗಿ ಸೈಟ್-2 ಗ್ರಾಮದ ಹತ್ತಿರ ಹಿರೇಹಳ್ಳಕ್ಕೆ ಅಡ್ಡಲಾಗಿ ಬ್ಯಾರೇಜ್ ನಿರ್ಮಾಣ ಕಾಮಗಾರಿಯ 75.50 ಲಕ್ಷ ರೂ.ಗಳ ಅಂದಾಜಿಗೆ ಮೇಲೆ (2) ರಲ್ಲಿ ಓದಲಾದ ದಿನಾಂಕ 24/12/09ರ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ಕಛೇರಿ ನೋಂದಣಿ ಸಂಖ್ಯೆ: 16/2010-11ರಲ್ಲಿ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ. ಈ ಕಾಮಗಾರಿಗೆ ಎ.ಐ.ಬಿ.ಪಿ ಕಾರ್ಯಕ್ರಮದಡಿ ಭಾರತ ಸರ್ಕಾರದ ಅನುಮೋದನೆ ದೊರಕಿರುತ್ತದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬೆಳಗಾವಿ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ-ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಜಿಲ್ಲಾ ಟೆಂಡರ್ ಬುಲೆಟಿನ್ | 23/08/2010 |
| ಸಂಯುಕ್ತ ಕರ್ನಾಟಕ ದಿನಪತ್ರಿಕೆ ಮತ್ತು ಡೆಕ್ಕನ್ ಹೆರಾಲ್ಡ್ ದಿನಪತ್ರಿಕೆ | 28/08/2010 |

ದಿನಾಂಕ:04/10/2010ರಂದು ಇ–ಪ್ರಕ್ಯೂರ್‌ಮೆಂಟ್ ಮೂಲಕ ಟೆಂಡರಿನ ತಾಂತ್ರಿಕ ಬಿಡ್ ಅನ್ನು ತೆರೆದು ಪರಿಶೀಲಿಸಲಾಗಿದ್ದು, ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ 4 ಜನ ಗುತ್ತಿಗೆದಾರರು ಟೆಂಡರ್‌ನಲ್ಲಿ ಭಾಗವಹಿಸಿದ್ದು, ಇಬ್ಬರು ಗುತ್ತಿಗೆದಾರರು ಮಾತ್ರ ಅರ್ಹತೆ ಹೊಂದಿದ್ದು, ಅವರ ಆರ್ಥಿಕ ಬಿಡ್‌ಅನ್ನು ದಿನಾಂಕ 21/10/10 ರಂದು ತೆರೆಯಲಾಗಿದ್ದು, ವಿವರಗಳು ಕೆಳಕಂಡಂತಿವೆ.

| | | | | |
|---|---|---|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | ರೂ. 64,07,525/– | |
| 2010–11ನೇ ಸಾಲಿಗೆ ಮುಂದುವರೆಸಿರುವ 2007–08 ನೇ ಸಾಲಿನ ದರಪಟ್ಟಿಯ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | | ರೂ. 61,22,070/– | |
| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ /ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| 1 | ವಿ.ಎಂ. ಹೆಬ್ಬಾಳ ಪ್ರಥಮ ದರ್ಜೆ ಗುತ್ತಿಗೆದಾರರು. | 65,91,144/– | 2.87 ಹೆಚ್ಚು | 7.66 ಹೆಚ್ಚು |
| 2 | ತಮ್ಮಣ್ಣ ವಿ. ಪವಾರ, ಪ್ರಥಮ ದರ್ಜೆ ಗುತ್ತಿಗೆದಾರರು | 67,21,556/– | 4.90 ಹೆಚ್ಚು | 9.79 ಹೆಚ್ಚು |

ಮೇಲ್ಕಂಡಂತೆ ಶ್ರೀ ವಿ.ಎಂ. ಹೆಬ್ಬಾಳ, 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ನಮೂದಿಸಿದ ದರಗಳನ್ನು 2010–11ನೇ ಸಾಲಿಗೆ ಮುಂದುವರೆಸಿರುವ 2007–08ನೇ ಸಾಲಿನ ದರಪಟ್ಟಿಯ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತಕ್ಕೆ ಹೋಲಿಸಿದಾಗ ಶೇಕಡ 7.66ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 06/01/2011 ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ 2010–11 ನೇ ಸಾಲಿಗೆ ಮುಂದುವರೆಸಿರುವ 2007–08 ನೇ ಸಾಲಿನ ದರಪಟ್ಟಿಯ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ ರೂ. 61,22,070/– ಗಳ ಮೇಲೆ ಶೇಕಡ 7.50 ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 65,81,225/– ಗಳಿಗೆ ಕಾಮಗಾರಿಯನ್ನು ಶ್ರೀ ವಿ. ಎಂ. ಹೆಬ್ಬಾಳ, 1ನೇ ದರ್ಜೆ ಗುತ್ತಿಗೆದರರು ರವರಿಗೆ ವಹಿಸುವಂತೆ ಶಿಫಾರಸ್ಸು ಮಾಡಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 3ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 54 ಅಪಿಬಿಂ 2010, ಬೆಂಗಳೂರು, ದಿನಾಂಕ 03 ನೇ ಫೆಬ್ರವರಿ 2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೆಳಗಾವಿ ಜಿಲ್ಲೆ, ಅಥಣಿ ತಾಲ್ಲೂಕಿನ ಕಿರಣಗಿ ಸೈಟ್–2 ಗ್ರಾಮದ ಹತ್ತಿರ ಹಿರೇಹಳ್ಳಕ್ಕೆ ಅಡ್ಡಲಾಗಿ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಟೆಂಡರ್ ಕಾಮಗಾರಿಯನ್ನು 2010–11ನೇ ಸಾಲಿಗೆ ಮುಂದುವರೆಸಿರುವ 2007–08ನೇ ಸಾಲಿನ ದರಪಟ್ಟಿಯ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ ರೂ. 61,22,070/– ಗಳ ಮೇಲೆ ಶೇಕಡ 7.50ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 65,81,225/– ಗಳಿಗೆ (ಅರವತ್ತೈದು ಲಕ್ಷದ ಎಂಬತ್ತೊಂದು ಸಾವಿರದ ಇನ್ನೂರ ಇಪ್ಪತ್ತೈದು ರೂ.ಗಳು ಮಾತ್ರ) ಶ್ರೀ ವಿ.ಎಂ. ಹೆಬ್ಬಾಳ, ಒಂದನೇ ದರ್ಜೆ ಗುತ್ತಿಗೆದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್ 328

**ರುದ್ರಮೂರ್ತಿ**
ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ
ಜಲ ಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ** : ಹಾವೇರಿ ಜಿಲ್ಲೆ, ರಾಣೆಬೆನ್ನೂರು ತಾಲ್ಲೂಕಿನ ಅಸುಂಡಿ ನಾಲಾ ಕೆರೆ ಸೈಟ್– 2 (ಗಂಗಾಪುರ) ಹತ್ತಿರ ಹಳ್ಳಕ್ಕೆ ಅಡ್ಡಲಾಗಿ ಬಂದಾರ ನಿರ್ಮಾಣ ಕಾಮಗಾರಿಯ ಟೆಂಡರ್ ಅನುಮೋದನೆ ಕುರಿತು.

**ಓದಲಾಗಿದೆ:** 1) ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಸಂಖ್ಯೆ: ಮುಇಂ/ಸನೀ/(ಉ) ವಲಯ /ಬಿಜೆಪಿ/ಎಇ–3/2010–11/6340 ದಿನಾಂಕ 01.12.2010

**2)** ಸರ್ಕಾರದ ಆದೇಶ ಸಂಖ್ಯೆ: ಸನೀಇ 236 ಮಸಾವಿ 2009 (1), ದಿ: 24/12/09.

**3)** ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ರವರ ದಿನಾಂಕ 22/01/2011ರ ಪತ್ರ ಸಂಖ್ಯೆ: ಮುಸದ/ಆಪ್ತಶಾಖೆ/ಟೆಂಡರ್/08–09/249.

**ಪ್ರಸ್ತಾವನೆ:**

ಹಾವೇರಿ ಜಿಲ್ಲೆ, ರಾಣೆಬೆನ್ನೂರು ತಾಲ್ಲೂಕಿನ ಅಸುಂಡಿ ನಾಲಾ ಕೆರೆ ಸೈಟ್–2 (ಗಂಗಾಪುರ) ಹತ್ತಿರ ಹಳ್ಳಕ್ಕೆ ಅಡ್ಡಲಾಗಿ ಬಂದಾರ ನಿರ್ಮಾಣ ಕಾಮಗಾರಿಯ 99.00 ಲಕ್ಷ ರೂ.ಗಳ ಅಂದಾಜಿಗೆ ಮೇಲೆ (2) ರಲ್ಲಿ ಓದಲಾದ ದಿನಾಂಕ 24/12/09ರ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ. ಈ ಕಾಮಗಾರಿಗೆ ಎ.ಐ.ಬಿ.ಪಿ ಕಾರ್ಯಕ್ರಮದಡಿ ಭಾರತ ಸರ್ಕಾರದ ಅನುಮೋದನೆ ದೊರಕಿರುತ್ತದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಧಾರವಾಡ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ರಾಜ್ಯ ಟೆಂಡರ್ ಬುಲೆಟಿನ್ ಮತ್ತು ಜಿಲ್ಲಾ ಟೆಂಡರ್ ಬುಲೆಟಿನ್ | 28/08/2010 |
| ವಿಜಯ ಕರ್ನಾಟಕ ದಿನಪತ್ರಿಕೆ ಮತ್ತು ಡೆಕ್ಕನ್ ಹೆರಾಲ್ಡ್ ದಿನಪತ್ರಿಕೆ | 30/08/2010 |

ದಿನಾಂಕ:18/10/2010ರಂದು ಇ–ಪ್ರಕ್ಯೂರ್‌ಮೆಂಟ್ ಮೂಲಕ ಟೆಂಡರಿನ ತಾಂತ್ರಿಕ ಬಿಡ್‌ಅನ್ನು ತೆರೆದು ಪರಿಶೀಲಿಸಲಾಗಿದ್ದು, ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಇಬ್ಬರು ಗುತ್ತಿಗೆದಾರರು ಟೆಂಡರ್‌ನಲ್ಲಿ ಭಾಗವಹಿಸಿದ್ದು, ಇಬ್ಬರೂ ಗುತ್ತಿಗೆದಾರರು ಅರ್ಹತೆ ಹೊಂದಿದ್ದು, ಆರ್ಥಿಕ ಬಿಡ್‌ಗಳನ್ನು ತೆರೆದು ಪರಿಶೀಲಿಸಲಾಗಿದ್ದು, ವಿವರಗಳು ಕೆಳಕಂಡಂತಿವೆ.

| | | | | |
|---|---|---|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | ರೂ. 93,48,518/– | |
| ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | | ರೂ. 88,03,139/– | |
| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ /ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| 1 | ಶ್ರೀ ಎಸ್.ಶಂಕರ ರೆಡ್ಡಿ ಪ್ರಥಮ ದರ್ಜೆ ಗುತ್ತಿಗೆದಾರರು. | 92,57,033/– | 0.98 ಕಡಿಮೆ | 5.156 ಹೆಚ್ಚು |
| 2 | ಶ್ರೀ ಕೆ.ಆರ್ ಶೆಟ್ಟಿ, ಪ್ರಥಮ ದರ್ಜೆ ಗುತ್ತಿಗೆದಾರರು | 1,23,18,764/– | 31,77 ಹೆಚ್ಚು | 39.94 ಹೆಚ್ಚು |

ಮೇಲ್ಕಂಡಂತೆ ಕ್ರ.ಸಂ. 1ರಲ್ಲಿರುವ ಶ್ರೀ ಎಸ್. ಶಂಕರರೆಡ್ಡಿ, 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರಿಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 5.156ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 06/01/2011 ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಇವರ ಟೆಂಡರ್‌ನ್ನು ಪರಿಶೀಲಿಸಿದ ನಂತರ 2010–11 ನೇ ಸಾಲಿಗೆ ಮುಂದುವರೆಸಿರುವ 2007–09ನೇ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 88,03,139/–ಗಳ ಮೇಲೆ ಶೇಕಡ 5.156ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 92,57,033/–ಗಳಿಗೆ ಕಾಮಗಾರಿಯನ್ನು ಶ್ರೀ ಎಸ್. ಶಂಕರರೆಡ್ಡಿ, ಒಂದನೇ ದರ್ಜೆ ಗುತ್ತಿಗೆದಾರರಿಗೆ ವಹಿಸುವಂತೆ ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 3ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 56 ಅಪಿಬಂ 2010, ಬೆಂಗಳೂರು, ದಿನಾಂಕ 03 ನೇ ಫೆಬ್ರವರಿ 2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಹಾವೇರಿ ಜಿಲ್ಲೆ, ರಾಣೆಬೆನ್ನೂರು ತಾಲ್ಲೂಕಿನ ಅಸುಂಡಿ ನಾಲಾ ಕೆರೆ ಸೈಟ್–2 (ಗಂಗಾಪುರ) ಹತ್ತಿರ ಹಳ್ಳಕ್ಕೆ ಅಡ್ಡಲಾಗಿ ಬಂದಾರ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 88,03,139/– ಗಳ ಮೇಲೆ ಶೇಕಡ 5.156ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 92,57,033/–ಗಳಿಗೆ (ತೊಂಬತ್ತೆರಡು ಲಕ್ಷದ ಐವತ್ತೇಳು ಸಾವಿರದ ಮುವ್ವತ್ತಮೂರು ರೂ.ಗಳು ಮಾತ್ರ) ಶ್ರೀ ಎಸ್. ಶಂಕರ ರೆಡ್ಡಿ, ಒಂದನೇ ದರ್ಜೆ ಗುತ್ತಿಗೆದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್ 329

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಬಳ್ಳಾರಿ ಜಿಲ್ಲೆಯ ಹಡಗಲಿ ತಾಲ್ಲೂಕಿನ ಕುಡುಗೋಲುಮಟ್ಟಿ ಏತ ನೀರಾವರಿ ಯೋಜನೆಗೆ ಹಿರೇಹಡಗಲಿ ಗ್ರಾಮದ 66/11 ಕೆ.ವಿ. ಸಬ್ ಸ್ಟೇಶನ್‌ನಿಂದ ಎಕ್ಸ್‌ಪ್ರೆಸ್ ಫೀಡರ್ ಲೈನ್ ಮುಖಾಂತರ ವಿದ್ಯುತ್ ಸಂಪರ್ಕ ಕಲ್ಪಿಸುವ ಕಾಮಗಾರಿಯ ಟೆಂಡರ್ ಅನುಮೋದನೆ ಕುರಿತು.

**ಓದಲಾಗಿದೆ:** 1) ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಸಂಖ್ಯೆ: ಮುಇಂ/ಸನೀ/(ಉ)ವ/ಬಿಜೆಪಿ/ಪಿಬಿ–12/2010–11/6717 ದಿನಾಂಕ 22.12.2010.

**2)** ಸರ್ಕಾರದ ಆದೇಶ ಸಂಖ್ಯೆ: ಸನೀಇ 13 ನಯೋಕಾ 2006 ದಿನಾಂಕ 17/03/2007

**3)** ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ರವರ ದಿನಾಂಕ 22.01.2011ರ ಪತ್ರ ಸಂಖ್ಯೆ: ಮುಸದ/ಆಪ್ತಶಾಖೆ/ಟೆಂಡರ್/08–09–249.

**ಪ್ರಸ್ತಾವನೆ:**

ಬಳ್ಳಾರಿ ಜಿಲ್ಲೆಯ ಹಡಗಲಿ ತಾಲ್ಲೂಕಿನ ಕುಡುಗೋಲುಮಟ್ಟಿ ಏತ ನೀರಾವರಿ ಯೋಜನೆ ಕಾಮಗಾರಿಯ ರೂ. 780.00 ಲಕ್ಷಗಳ ಮೂಲ ಅಂದಾಜಿಗೆ ಮೇಲೆ (2) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು ಮೂಲ ಅಂದಾಜಿನಲ್ಲಿ 11 ಕೆ.ವಿ. ಎಕ್ಸ್‌ಪ್ರೆಸ್ ಫೀಡರ್ ಲೈನ್ ಮುಖಾಂತರ ಏತ ನೀರಾವರಿ ಯೋಜನೆಗೆ ವಿದ್ಯುತ್ ಸಂಪರ್ಕ ಕಲ್ಪಿಸಲು ರೂ. 45.00 ಲಕ್ಷಗಳ ಇಡಿಗಂಟನ್ನು ಅವಕಾಶ ಮಾಡಿದೆ. ಸದರಿ ಏತ ನೀರಾವರಿ ಯೋಜನೆಗೆ ವಿದ್ಯುತ್ ಸಂಪರ್ಕ ಕಲ್ಪಿಸಲು ಹಿರೇ ಹಡಗಲಿ ಗ್ರಾಮದ 66/11 ಕೆ.ವಿ. ಸಬ್‌ಸ್ಟೇಶನ್ ನಿಂದ ಎಕ್ಸ್‌ಪ್ರೆಸ್ ಫೀಡರ್ ಲೈನ್ ನಿರ್ಮಿಸುವ ಕಾಮಗಾರಿಗೆ ಜೆಸ್ಕಾಂ ನವರಿಂದ ತಯಾರಿಸಲ್ಪಟ್ಟ ರೂ. 25.27 ಲಕ್ಷ ಮೊತ್ತದ ಉಪ ಅಂದಾಜು ಪಟ್ಟಿಗೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರು ಅನುಮೋದನೆ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬಳ್ಳಾರಿ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಜಿಲ್ಲಾ ಟೆಂಡರ್ ಬುಲೆಟಿನ್ | 18/10/2010 |
| ವಿಜಯ ಕರ್ನಾಟಕ ದಿನಪತ್ರಿಕೆ | 18/10/2010 |

ದಿನಾಂಕ:03/11/2010ರಂದು ಟೆಂಡರ್‌ಅನ್ನು ತೆರೆದು ಪರಿಶೀಲಿಸಲಾಗಿದ್ದು, ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಟೆಂಡರ್ ನಲ್ಲಿ ಭಾಗವಹಿಸಿದ್ದ ಮೂರು ಜನ ಗುತ್ತಿಗೆದಾರರ ಪೈಕಿ ಒಬ್ಬ ಗುತ್ತಿಗೆದಾರರು ಮಾತ್ರ ಅರ್ಹತೆ ಹೊಂದಿರುತ್ತಾರೆ. ವಿವರಗಳು ಕೆಳಕಂಡಂತಿವೆ.

| | | | | |
|---|---|---|---|---|
| ಮಂಜೂರಾದ /ಅನುಮೋದಿತ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | ರೂ. 25,25,417/– | |
| 2009–10ನೇ ಸಾಲಿನ ದರಗಳನ್ನು 2010–11ನೇ ಸಾಲಿಗೆ ಮುಂದುವರೆಸಿರುವ ಜೆಸ್ಕಾಂ ಗುಲ್ಬರ್ಗದ ದರಪಟ್ಟಿಯ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | | ರೂ. 27,29,621/– | |
| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ /ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| 1 | ಮದೀನಾ ಎಲೆಕ್ಟ್ರಿಕಲ್ಸ್ ಪ್ರಥಮ ದರ್ಜೆ ಗುತ್ತಿಗೆದಾರರು. | 45,47,104/– | 80.05 ಹೆಚ್ಚು | 66.58 ಹೆಚ್ಚು |

ಮೇಲ್ಕಂಡಂತೆ ಮೆII ಮದೀನಾ ಎಲೆಕ್ಟ್ರಿಕಲ್ಸ್, 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿದ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರಿಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 66.58ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 06/01/2011 ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 27,29,621/– ಗಳ ಮೇಲೆ ಶೇ.12.00 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 30,57,176/– ಗಳಿಗೆ ಕಾಮಗಾರಿಯನ್ನು ಮೆII ಮದೀನಾ ಎಲೆಕ್ಟ್ರಿಕಲ್ಸ್, 1ನೇ ದರ್ಜೆ ಗುತ್ತಿಗೆದಾರರು ಇವರಿಗೆ ವಹಿಸುವಂತೆ ಶಿಫಾರಸ್ಸು ಮಾಡಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 2ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 68 ಏನಿಯೋ 2010, ಬೆಂಗಳೂರು, ದಿನಾಂಕ 03 ನೇ ಫೆಬ್ರವರಿ 2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬಳ್ಳಾರಿ ಜಿಲ್ಲೆಯ ಹಡಗಲಿ ತಾಲ್ಲೂಕಿನ ಕುಡುಗೋಲುಮಟ್ಟಿ ಏತ ನೀರಾವರಿ ಯೋಜನೆಗೆ ಹಿರೇಹಡಗಲಿ ಗ್ರಾಮದ 66/11 ಕೆ.ವಿ. ಸಬ್ ಸ್ಟೇಶನ್ ನಿಂದ ಎಕ್ಸ್‌ಪ್ರೆಸ್ ಫೀಡರ್ ಲೈನ್ ಮುಖಾಂತರ ವಿದ್ಯುತ್ ಸಂಪರ್ಕ ಕಲ್ಪಿಸುವ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 27,29,621/– ಗಳ ಮೇಲೆ ಶೇ. 12.00 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 30,57,176/– ಗಳಿಗೆ (ರೂ. ಮೂವತ್ತು ಲಕ್ಷ ಐವತ್ತೇಳು ಸಾವಿರದ ಒಂದು ನೂರ ಎಪ್ಪತ್ತಾರು) ಕಾಮಗಾರಿಯನ್ನು ಮೆII ಮದೀನಾ ಎಲೆಕ್ಟ್ರಿಕಲ್ಸ್, 1ನೇ ದರ್ಜೆ ಗುತ್ತಿಗೆದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್ 330

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**HEALTH AND FAMILY WELFARE SECRETARIAT**

**Sub :-** Designation of Comissioner, Health and Family Welfare Services as Commissioner of Food Safety for Karnataka.

**Read :-** (1) Government of Karnataka Order No: HFW 211 CGE 2008, dated: 04-10-2008.

(2) D.O. Letter No: 10/FSSAI/QCI/Study-2008, dated: 30-12-2010 of Chief Executive Officer, Food Safety and Standard Authority of India,.

***Preamble:***

The Food Safety and Standards Act 2006 (Central Act 34 of 2006) envisages appointment of Food Commissioners (Commissioners of Food Safety) at the state level. Accordingly, in the order dated: 4-10-2008 read at (1) above the Director, Health and Family Welfare Services, Karnataka has been appointed as the Commissioner of Food Safety for the State of Karnataka.

In the letter read at (2) above the Chief Executive Officer, Food Safety and Standard Authority of India, New Delhi, has stated that the draft rules to the Food Safety and Standard Act 2006, are in the process of being notified by the month of February 2011. In order to ensure smooth transition, from old Act it is necessary that all preparatry action may have to be taken well in time. According to the proposed Food Safety and Standard Rules, The Food Safety Commissioner shall be not below the rank of Commissioner and Secretary to State Government.

Hence, the following Order.

***Government Order No. HFW 31 FPR 2011 Bangalore, dated : 03-02-2011***

In exercise of the powers conferred under Section 30 of the food Safety and Standards Act 2006 (Central Act 34 of 2006) and in supersession of the G.O.No: HFW 211 CGE 2008, dated: 04-10-2008 Government of Karnataka hereby appoints the Commissioner, Health and Family Welfare Services, Karnataka as the Commissioner of Food Safety for the State of Karnataka.

By Order and in the name of the Governor of Karnataka,

**I. HEMANTH**

Under Secretary to Government,

Heath and Family welfare Department.

P.R. 331

**ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ**

**ವಿಷಯ :** ರಾಜ್ಯದಲ್ಲಿ ಸಾಮಾಜಿಕ ಆರ್ಥಿಕ ಸಮೀಕ್ಷೆ (ಸೋಷಿಯೋ ಎಕನಾಮಿಕ್ ಸರ್ವೆ – ಬಿಪಿಎಲ್ ಸೆನ್ಸಸ್ 2010) ನಡೆಸಲು ಅನುದಾನವನ್ನು ರಾಜ್ಯದ 15 ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1) ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ : ಕ್ಯೂ 16025/ 8/2006.ಎ1(ಆರ್‌ಡಿ) (ಪಿಟಿ) ದಿನಾಂಕ 31–03–2010

**2)** ಸರ್ಕಾರದ ಪತ್ರದ ಸಮಸಂಖ್ಯೆ: ದಿನಾಂಕ 06/08/2010

**3)** ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 10 ಎಸ್‌ಜೆವೈ 2010, ಬೆಂಗಳೂರು ದಿನಾಂಕ 21–08–2010

**ಪ್ರಸ್ತಾವನೆ:**

ಕೇಂದ್ರ ಸರ್ಕಾರದ ಗ್ರಾಮೀಣಾಭಿವೃದ್ಧಿ ಮಂತ್ರಾಲಯವು ರಾಷ್ಟ್ರಾದ್ಯಂತ ಸಾಮಾಜಿಕ ಆರ್ಥಿಕ ಸಮೀಕ್ಷೆ (ಸೋಷಿಯೋ ಎಕನಾಮಿಕ್ ಸರ್ವೆ – ಬಿಪಿಎಲ್ ಸೆನ್ಸ್ 2010) ನಡೆಸಲು ಉದ್ದೇಶಿಸಿದೆ. ಈ ಸಮೀಕ್ಷೆಯ ಪೂರ್ಣ ವೆಚ್ಚವನ್ನು ಕೇಂದ್ರ ಸರ್ಕಾರವೇ ಭರಿಸುವುದು. ಇದರಂತೆ, ರಾಜ್ಯದಲ್ಲಿಯೂ ಸಮೀಕ್ಷೆ ನಡೆಸಬೇಕಾಗಿರುವುದರಿಂದ, ಓದಲಾಗಿದೆ (1) ರ ಪತ್ರದಲ್ಲಿ ಕೇಂದ್ರ ಸರ್ಕಾರ ರಾಜ್ಯಕ್ಕೆ ಮೊದಲನೇ ಕಂತಿನ ಅನುದಾನವಾಗಿ ` 6,20,62,000 ಗಳನ್ನು ಬಿಡುಗಡೆ ಮಾಡಿದೆ. ಓದಲಾಗಿದೆ (2) ರ ಸರ್ಕಾರದ ಪತ್ರದಲ್ಲಿ ರಾಜ್ಯದ ನಿಧಿಯಾಗಿ ` 22,22,000 ಗಳನ್ನು ಕಾಯ್ದಿರಿಸಿಕೊಂಡು, ಉಳಿದ ಅನುದಾನವನ್ನು 30 ಜಿಲ್ಲಾ ಪಂಚಾಯಿತಿಗಳಿಗೆ ವಿಂಗಡಣೆ ಮಾಡಿ ನಿಗದಿಪಡಿಸಿದೆ.

ಕೇಂದ್ರ ಸರ್ಕಾರದ ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ನಿರ್ದೇಶನದಂತೆ, ರಾಜ್ಯದ 14 ಜಿಲ್ಲೆಗಳ 14 ಗ್ರಾಮಗಳಲ್ಲಿ ಪ್ರಾಯೋಗಿಕವಾಗಿ ಸಾಮಾಜಿಕ ಆರ್ಥಿಕ ಸಮೀಕ್ಷೆ (ಸೋಷಿಯೋ ಎಕನಾಮಿಕ್ ಸರ್ವೆ – ಪೈಲಟ್ ಬಿಪಿಎಲ್ ಸೆನ್ಸಸ್ 2010) ನಡೆಸಬೇಕಾದುದರಿಂದ, ಓದಲಾಗಿದೆ (3)ರ ಆದೇಶದಲ್ಲಿ ರಾಜ್ಯ ಸರ್ಕಾರವು ಚಿಕ್ಕಮಗಳೂರು, ದಕ್ಷಿಣ ಕನ್ನಡ, ದಾವಣಗೆರೆ, ಧಾರವಾಡ, ಹಾಸನ, ಹಾವೇರಿ, ಕೊಡಗು, ಕೋಲಾರ, ಕೊಪ್ಪಳ, ಮೈಸೂರು, ರಾಮನಗರ, ಶಿವಮೊಗ್ಗ, ಉಡುಪಿ ಮತ್ತು ಉತ್ತರ ಕನ್ನಡ ಜಿಲ್ಲಾ ಪಂಚಾಯತಿಗಳಿಗೆ ` 3,14,62,000 ಗಳನ್ನು ಬಿಡುಗಡೆ ಮಾಡಿದೆ. ಇದರಲ್ಲಿ ಬೆಂಗಳೂರು ನಗರ ಜಿಲ್ಲಾ ಪಂಚಾಯತಿಗೆ ಸಮೀಕ್ಷೆಗಾಗಿ ` 13,60,000 ಗಳನ್ನು ಹಾಗೂ ರಾಜ್ಯದ ಪಾಲಿನ ನಿಧಿ ` 22,22,000 ಗಳನ್ನು ಸೇರಿ ಒಟ್ಟು ` 35,82,000 ಗಳನ್ನು ಬಿಡುಗಡೆಗೊಳಿಸಿದೆ.

ಕೇಂದ್ರ ಸರ್ಕಾರದ ನಿರ್ದೇಶನದಂತೆ ರಾಜ್ಯದ ಎಲ್ಲಾ ಜಿಲ್ಲಾ ಪಂಚಾಯತಿಗಳಲ್ಲಿ ಸಾಮಾಜಿಕ ಆರ್ಥಿಕ ಸಮೀಕ್ಷೆ (ಸೋಷಿಯೋ ಎಕನಾಮಿಕ್ ಸರ್ವೆ– ಬಿಪಿಎಲ್ ಸೆನ್ಸಸ್ 2010) ನಡೆಸಬೇಕಾಗುತ್ತದೆ. ಆದುದುರಿಂದ ಈಗಾಗಲೇ ನಿಗದಿಪಡಿಸಿದ ಅನುದಾನವನ್ನು ಬಿಡುಗಡೆಗೊಳಿಸಿರುವ 15 ಜಿಲ್ಲಾ ಪಂಚಾಯತಿಗಳನ್ನು ಹೊರತುಪಡಿಸಿ ಉಳಿದ 15 ಜಿಲ್ಲಾ ಪಂಚಾಯತಿಗಳಾದ ಬಾಗಲಕೋಟೆ, ಬೆಂಗಳೂರು ಗ್ರಾಮಾಂತರ, ಬೆಳಗಾಂ, ಬಳ್ಳಾರಿ, ಬೀದರ್, ಬಿಜಾಪುರ, ಚಾಮರಾಜನಗರ, ಚಿಕ್ಕಬಳ್ಳಾಪುರ, ಚಿತ್ರದುರ್ಗ, ಗದಗ್, ಗುಲ್ಬರ್ಗಾ, ಮಂಡ್ಯ, ರಾಯಚೂರು, ತುಮಕೂರು ಮತ್ತು ಯಾದಗಿರಿ ಜಿಲ್ಲಾ ಪಂಚಾಯತಿಗಳಿಗೆ ` 3,06,00,000ಗಳನ್ನು ಬಿಡುಗಡೆಗೊಳಿಸಬೇಕಾಗಿದೆ. ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 10 ಎಸ್‌ಜೆವೈ 2010, ಬೆಂಗಳೂರು, 28–01–2011**

ರಾಜ್ಯ ಸರ್ಕಾರವು, ಸಾಮಾಜಿಕ ಆರ್ಥಿಕ ಸಮೀಕ್ಷೆ (ಸೋಷಿಯೋ ಎಕನಾಮಿಕ್ ಸರ್ವೆ–ಬಿಪಿಎಲ್ ಸೆನ್ಸಸ್–2010) ಗಾಗಿ ಅನುಬಂಧದಲ್ಲಿ ತೋರಿಸಿರುವ 15 ಜಿಲ್ಲಾ ಪಂಚಾಯತಿಗಳಿಗೆ ` 3,06,00,000 (` ಮೂರು ಕೋಟಿ ಆರು ಲಕ್ಷ ಮಾತ್ರ) ಗಳನ್ನು ಕೆಳಕಂಡ ಷರತ್ತುಗಳಿಗೊಳಪಟ್ಟು ಮಂಜೂರಾತಿ ನೀಡಿ ಬಿಡುಗಡೆ ಮಾಡಿದೆ.

**ಷರತ್ತುಗಳು :**

ಅನುದಾನವನ್ನು ಖಜಾನೆಯಿಂದ ಸೆಳೆದು ಸಾಮಾಜಿಕ ಆರ್ಥಿಕ ಸಮೀಕ್ಷೆ (ಸೋಷಿಯೋ ಎಕನಾಮಿಕ್ಸ್ ಸರ್ವೆ–ಬಿಪಿಎಲ್ ಸೆನ್ಸಸ್ 2010) ಗಾಗಿಯೇ ಪ್ರತ್ಯೇಕ ಬ್ಯಾಂಕ್ ಖಾತೆ ತೆರೆದು ಜಮೆ ಮಾಡತಕ್ಕದ್ದು.

ಸಾಮಾಜಿಕ ಆರ್ಥಿಕ ಸಮೀಕ್ಷೆ (ಸೋಷಿಯೋ ಎಕನಾಮಿಕ್ ಸರ್ವೆ–ಬಿಪಿಎಲ್ ಸೆನ್ಸಸ್ 2010) ಮಾರ್ಗಸೂಚಿಯಂತೆ ಅನುದಾನವನ್ನು ಉಪಯೊಗಿಸತಕ್ಕದ್ದು.

ಸಮೀಕ್ಷೆಗಾಗಿ ಬಿಡುಗಡೆ ಮಾಡಿದ ಅನುದಾನವನ್ನು ಬೇರೆ ಯಾವ ಉದ್ದೇಶಗಳಿಗೆ ಬಳಸದೆ, ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಆಗಿಂದಾಗ್ಗೆ ನೀಡುವ ಸೂಚನೆಗಳನ್ವಯ ವೆಚ್ಚ ಮಾಡುವುದು.

ಯೋಜನೆಯ ವೆಚ್ಚವನ್ನು ಪ್ರಧಾನ ಲೆಕ್ಕ ಶೀರ್ಷಿಕೆ "2501 ಗ್ರಾಮೀಣಾಭಿವೃದ್ಧಿಗಾಗಿ ವಿಶೇಷ ಕಾರ್ಯಕ್ರಮಗಳು 01 ಸಮಗ್ರ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು–198–ಗ್ರಾಮಪಂಚಾಯತ್‌ಗಳಿಗೆ ಸಹಾಯ–6–ಗ್ರಾಮ ಪಂಚಾಯತ್‌ಗಳು–01–ಬ್ಲಾಕ್ ಅನುದಾನ ಕೇಂದ್ರ ಪುರಸ್ಕೃತ ಯೋಜನೆ (ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ) 2010–2011 ನೇ (2501–01–198–6–01)" (ಲಿಂಕ್ ಕೋಡ್ 2501–01–800–0–07) ಸಾಲಿನಲ್ಲಿ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 7 ಜೆಡ್‌ಪಿಎ 2003 ದಿನಾಂಕ 14–07–2005 ರನ್ವಯ ಖಜಾನೆಯಿಂದ ಪಡೆಯುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತಿಗಳ ಮುಖ್ಯ ಲೆಕ್ಕಾಧಿಕಾರಿಗಳು ಹಣ ತೆಗೆಯಲು ಕಾನೂನು ರೀತ್ಯ ಅಧಿಕಾರ ನೀಡಲಾಗಿದೆ.

ಬಿಡುಗಡೆ ಮಾಡಿದ ಅನುದಾನದ ಆಂತರಿಕ ಲೆಕ್ಕ ಪರಿಶೋಧನೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಮಾಡುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರ ಸಹಮತಿ ಸಂಖ್ಯೆ ಗ್ರಾಅಪ 7 ಪಿಬಿಎಸ್ 2011 ದಿನಾಂಕ 17–01–2011 ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಪಿ.ಎ. ಮೇಘಣ್ಣವರ**
ನಿರ್ದೇಶಕರು (ಸ್ವಉಕಾ) ಹಾಗೂ ಪ.ನಿ.
ಸರ್ಕಾರದ ಜಂಟಿ ಕಾರ್ಯದರ್ಶಿ
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

**ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 10 ಎಸ್‌ಜೆವೈ 2010, ಬೆಂಗಳೂರು, ದಿನಾಂಕ : 28–01–2011**

(` ಗಳಲ್ಲಿ)

| ಕ್ರ. ಸಂ | ಜಿಲ್ಲಾ ಪಂಚಾಯತಿಯ ಹೆಸರು | ಜಿಪಂ ಕೋಡ್ | ಡಿ.ಡಿ.ಓ ಕೋಡ್ | ರಾಜ್ಯ ಸರ್ಕಾರವು ಬಿಡುಗಡೆ ಮಾಡುತ್ತಿರುವ ಮೊದಲನೇ ಕಂತಿನ ಅನುದಾನ |
|---|---|---|---|---|
| 1 | ಬಾಗಲಕೋಟೆ | 461 | 2900ZZ0001 | 20,40,000 |
| 2 | ಬೆಂಗಳೂರು ಗ್ರಾ | 402 | 0300ZZ8001 | 13,60,000 |
| 3 | ಬೆಳಗಾಂ | 413 | 2200ZZ0002 | 34,00,000 |
| 4 | ಬಳ್ಳಾರಿ | 418 | 3400ZZ0001 | 23,80,000 |
| 5 | ಬೀದರ್ | 419 | 3800ZZ5701 | 17,00,000 |
| 6 | ಬಿಜಾಪುರ | 414 | 2800ZZ9152 | 17,00,000 |
| 7 | ಚಾಮರಾಜನಗರ | 456 | 1000ZZ0001 | 13,60,000 |
| 8 | ಚಿಕ್ಕಬಳ್ಳಾಪುರ | 453 | 0600ZZ0001 | 20,40,000 |
| 9 | ಚಿತ್ರದುರ್ಗ | 403 | 1600ZZ0001 | 20,40,000 |
| 10 | ಗದಗ್ | 462 | 2600ZZ0001 | 17,00,000 |
| 11 | ಗುಲ್ಬರ್ಗಾ | 417 | 3200ZZ0003 | 23,80,000 |
| 12 | ಮಂಡ್ಯ | 412 | 1100ZZ0001 | 23,80,000 |
| 13 | ರಾಯಚೂರು | 420 | 3600ZZ0001 | 17,00,000 |
| 14 | ತುಮಕೂರು | 406 | 0800ZZ0001 | 34,00,000 |
| 15 | ಯಾದಗಿರಿ | 421 | 3300ZZ0001 | 10,20,000 |
| | ಒಟ್ಟು ` | | | 3,06,00,000 |

**ಪಿ.ಎ. ಮೇಘಣ್ಣವರ**
ನಿರ್ದೇಶಕರು (ಸ್ವಉಕಾ) ಹಾಗೂ ಪ.ನಿ.
ಸರ್ಕಾರದ ಜಂಟಿ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

ಪಿ.ಆರ್ 332